# ಅಚಲ ತಿಂಗಳ ಪತ್ರಿಕೆ

27

ಬೆಲೆ - ಬಿಡಿಪ್ರತಿ : 4 ರೂ.

ಆಗಸ್ಟ್ - 2004

## ಒಳಗೇನಿದೆ






ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ, ಬೆಂಗಳೂರು

# ಅಚಲ

ಸಂಪುಟ - 19 ಸಂಚಿಕೆ : 8

ಸಂಪಾದಕ ಮಂಡಲಿ
ಎನ್. ಗಾಯತ್ರಿ
ನೇಮಿಚಂದ್ರ, ದೇವಿ,
ಶಾಂತಾನಾಗರಾಜ್
ಹೆಚ್. ಎನ್: ಗೀತಾ
ಹೇಮಲತಾ ಮಹಿಷಿ

ಪ್ರಕಾಶಕರು
ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ
ಬೆಂಗಳೂರು


ಚಂದಾ ಹಣವನ್ನು ಚೆಕ್‌ನಲ್ಲಿ ಕಳುಹಿಸುವವರು ರೂ. 10 ಬ್ಯಾಂಕ್ ಕಮೀಷನ್ ಸೇರಿಸಿ ಕಳುಹಿಸಬೇಕು. ಎಂ. ಓ. ಫಾರ್ಮಿನ ಕೊನೆಯ ಭಾಗದಲ್ಲಿ ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ನಮೂದಿಸಬೇಕು. ಬದಲಾದ ವಿಳಾಸವನ್ನು ದಯವಿಟ್ಟು ಬರೆದು ತಿಳಿಸಿ.


Achala - Edited by
Dr. N. Gayathri

Published by
Dr. G. Ramakrishna on behalf of Jagruthi Mahila Adhyayana Kendra

Printed at
Lipi Mudrana
Bangalore - 560 004


ಆತ್ಮೀಯರೆ,

ಕಳೆದ 19 ವರ್ಷಗಳಿಂದಲೂ ತಾವುಗಳು ಪ್ರೀತಿ, ಅಭಿಮಾನದಿಂದ ಅಚಲ ಪತ್ರಿಕೆಯನ್ನು ನಿಮ್ಮದಾಗಿಸಿಕೊಂಡು ಪೋಷಿಸುತ್ತಾ ಬಂದಿರುತ್ತೀರಿ. ಮಹಿಳಾ ಚಳುವಳಿಯ ಮತ್ತು ಸಂಶೋಧನೆಯ ಕ್ಷೇತ್ರದಲ್ಲಿ ಇನ್ನೂ ಬೆಟ್ಟದಷ್ಟು ಕೆಲಸವಾಗಬೇಕಿದೆ. ಈ ಮಹತ್ತರ ಕಾರ್ಯದಲ್ಲಿ ನಾವೆಲ್ಲರೂ ಒಟ್ಟಾಗಿ ಶ್ರಮಿಸಬೇಕಿದೆ. ನೀವೂ ಅಚಲ ಪತ್ರಿಕೆಯನ್ನು ನಿಮ್ಮ ವಿಚಾರಗಳ ವೇದಿಕೆಯನ್ನಾಗಿ ಮಾಡಿಕೊಳ್ಳಿ ಮತ್ತು ಪತ್ರಿಕೆಯ ಪ್ರಸಾರವನ್ನು ಹೆಚ್ಚಿಸುವಲ್ಲಿ ನೆರವಾಗಿ.

ಯಾವುದೇ ವಿವರಗಳನ್ನು ಬರೆಯದ ಚಂದಾಹಣವು ಹಲವಾರು ಎಂ.ಓ ಗಳಲ್ಲಿ ನಮಗೆ ತಲುಪಿದೆ. ಚಂದಾದಾರರು ದಯವಿಟ್ಟು ಎಂ.ಓ ಫಾರ್ಮಿನ ಹಿಂಭಾಗದಲ್ಲಿ ವಿಳಾಸವನ್ನು ಬರೆಯಿರಿ.

## ಅಚಲದ ಚಂದಾ ಬದಲಾಗಿದೆ

ವಾರ್ಷಿಕ ಚಂದಾ - ರೂ.50/- (ವ್ಯಕ್ತಿಗಳಿಗೆ)
ರೂ. 100/- (ಸಂಸ್ಥೆಗಳಿಗೆ)
ಅಜೀವ ಚಂದಾ - ರೂ. 300/- (ವ್ಯಕ್ತಿಗಳಿಗೆ)
ರೂ. 400/- (ಸಂಸ್ಥೆಗಳಿಗೆ)


**ಅಚಲ ವಿಳಾಸ**

108, ಸ್ಕೈಲೈನ್ ಸುರಭಿ, 14-ಪಿ, ವಿದ್ಯಾಪೀಠ ರಸ್ತೆ,
ಬನಶಂಕರಿ 3ನೇ ಹಂತ, ಬೆಂಗಳೂರು - 560 085

✍ ಸಂಪಾದಕೀಯ

# ಶಿಕ್ಷೆ ಯಾರಿಗೆ?

ಕೋಲ್ಕತ್ತಾದ ಧನಂಜಯ ಚಟರ್ಜಿಗೆ ಆತ್ಮಹತ್ಯೆ ಮತ್ತು ಕೊಲೆಯ ಅಪರಾಧಕ್ಕಾಗಿ ಕಲ್ಕತ್ತಾ ಉಚ್ಚ ನ್ಯಾಯಾಲಯವು ವಿಧಿಸಿದ ಮರಣದಂಡನೆಯ ಶಿಕ್ಷೆಯನ್ನು ಕುರಿತಂತೆ ಇಡೀ ದೇಶದಲ್ಲಿ ಉಂಟಾದ ವಿವಾದದ ಸುಳಿ, ಪತ್ರಿಕೆಗಳ ಅತಿರಂಜಿತ ಸುದ್ದಿಯ ವೈಭವೀಕರಣವು ಕೊನೆಗೂ ನಮ್ಮ ಮನಸ್ಸಿನಲ್ಲಿ ಉಳಿಸಿದ ಪ್ರಶ್ನೆ 'ಶಿಕ್ಷೆ ಯಾರಿಗೆ' ಎಂದು.

ಕಳೆದ ಕೆಲವು ವರ್ಷಗಳಿಂದ ಅತ್ಯಾಚಾರದ ಪ್ರಕರಣಗಳು ವಿಶೇಷವಾಗಿ ಬೆಳಕಿಗೆ ಬರುತ್ತಿವೆ. ಅಪ್ರಾಪ್ತ ಬಾಲಕಿಯರು ಮತ್ತು ಚಿಕ್ಕ ಹುಡುಗಿಯರ ಮೇಲೆ ನಡೆಯುತ್ತಿರುವ ಅತ್ಯಾಚಾರದ ಪ್ರಕರಣಗಳು ಅವರನ್ನು ಸಾವಿನ ದವಡೆಗೆ ನೂಕುತ್ತಿವೆ. ಹದಿನಾಲ್ಕು ವರ್ಷಗಳ ಹಿಂದೆ ಕೋಲ್ಕತ್ತಾದ ಹದಿನಾಲ್ಕು ವರ್ಷ ವಯಸ್ಸಿನ ಹೇತಲ್ ಪರೇಖ್‌ನ ಮೇಲೆ ಧನಂಜಯ್ ನಡೆಸಿದ ಅತ್ಯಾಚಾರ ಮತ್ತು ಅವಳನ್ನು ಅತ್ಯಂತ ಬರ್ಬರ ರೀತಿಯಲ್ಲಿ ಕೊಲೆಗೈದ ಹೃದಯ ವಿದ್ರಾವಕ ಘಟನೆ ಜನರ ಮನಸ್ಸಿನಿಂದ ಅಳಿಸಿಯೇ ಹೋಗಿರಬಹುದು. ತಮ್ಮ ಯಾವ ತಪ್ಪೂ ಇಲ್ಲದೆ ಪ್ರೀತಿಯ ಮಗಳನ್ನು ಕಳೆದುಕೊಂಡ ಹೇತಲ್ ಕುಟುಂಬ ಘಟನೆಯ ಆರು ತಿಂಗಳ ನಂತರ ತಮ್ಮ ಆಸ್ತಿಯನ್ನು ಮಾರಿ ಮುಂಬೈಗೆ ಹೋಗಿ ನೆಲೆಸಿದರು. ನಂತರ ಅವರು ಏನಾದರು, ಎಂಬ ಸುದ್ದಿಯ ಬಗ್ಗೆ ಪತ್ರಿಕೆಗಳು ತಲೆ ಕೆಡಿಸಿಕೊಂಡಿವೆಯೇ? ಹೇತಲ್‌ಳನ್ನು ಕೊಂದ ಧನಂಜಯ ಚಟರ್ಜಿಯು ಹೇಗೆ ಸತ್ತ, ಏನು ಹೇಳಿದ, ಏನು ಹಾಡಿದ ಎಂದೆಲ್ಲ ವರದಿಯ ಸುರುಳಿಯನ್ನು ಬಿಚ್ಚಿದ ಮಾಧ್ಯಮ ಪ್ರಪಂಚ ಬಲಿಪಶುವಾದವರ ಬಗ್ಗೆ ಸೊಲೆತ್ತಲಿಲ್ಲ. ಇಲ್ಲಿ ಅತ್ಯಾಚಾರಿಗಾದ ಶಿಕ್ಷೆಯನ್ನು ವಿಜಯೋತ್ಸಾಹದಂತೆ ಸಂಭ್ರಮಿಸಬೇಕಿಲ್ಲ ನಿಜ ಆದರೆ ಧನಂಜಯ ಚಟರ್ಜಿಯನ್ನು ಒಬ್ಬ ಹೀರೋವಿನ ರೀತಿಯಲ್ಲಿ ಮಾಧ್ಯಮಗಳು ಚಿತ್ರಿಸಿದ್ದು ತೀರ ನಾಚಿಕೆಗೇಡಿನ ವಿಷಯ. ಅವನ ಮರಣ ದಂಡನೆಯನ್ನು ವಿರೋಧಿಸಿ ನಡೆಸಿದ ಬೆಂಬಲದ ಸಭೆ, ಮೋರ್ಚಾಗಳು, ಮೇಣದ ಬತ್ತಿಯ ಮೆರವಣಿಗೆಗಳು ಯಾವುದು ಮಾನವೀಯತೆ? ಎಂಬುದರ ಬಗ್ಗೆ ಸಂಶಯಪಡುವಂತೆ ಮಾಡುತ್ತವೆ.

ಈ ವರ್ಷದ ಮಾರ್ಚ್ ತಿಂಗಳಲ್ಲಿ ದಕ್ಷಿಣ ಗೋವಾದ ಬೇತುಲ್ ಗ್ರಾಮದಲ್ಲಿ ಹತ್ತು ವರ್ಷದ ಶಾಲಾ ಬಾಲಕಿಯೊಬ್ಬಳ ಮೇಲೆ ಸಾಮೂಹಿಕ ಅತ್ಯಾಚಾರ ನಡೆದು, ಅವಳನ್ನು ಸಾಯಿಸಲಾಯಿತು. ಅವಳಿಗೊದಗಿದ ದುರಂತವನ್ನು ಜೀರ್ಣಿಸಿಕೊಳ್ಳಲಾರದ ತಂದೆ ಹುಚ್ಚನಂತಾಗಿ ಆ ನೋವು ತಾಳಲಾರದೆ ಆತ್ಮಾಹುತಿ ಮಾಡಿಕೊಂಡ. ಸುಮಾರು ತಿಂಗಲುಗಳ ಕಾಲ ಪ್ರತಿ ದಿನ ಪೋಲಿಸ್ ಠಾಣೆಗೆ ಹೋಗಿ ತನ್ನ ಮಗಳ ಸಾವಿಗೆ ಕಾರಣರಾದವರ ಬಗ್ಗೆ ಸುಳಿವು ಸಿಕ್ಕಿತೇ ಎಂದು ವಿಚಾರಿಸಿ ಬರುತ್ತಿದ್ದ ತಂದೆಗೆ ಕಾನೂನಿನ ನಿದಾನ ನಡೆಯಲ್ಲಿ ವಿಶ್ವಾಸವೇ ಕರಗಿ ಹೋಗಿ ಆತ್ಮಹತ್ಯೆಗೆ ಮೊರೆ ಹೋದದ್ದು ನಿಜಕ್ಕೂ ದುರಂತ. ಇಲ್ಲಿ ಶಿಕ್ಷೆಯಾದದ್ದು ಹೇಳಬೇಕಿಲ್ಲ!

ಧನಂಜಯ ಚಟರ್ಜಿಯ ಮರಣದಂಡನೆಯ ನಂತರ ಅಹಮದಾಬಾದಿನ ಆರುವರ್ಷದ ಕೂಸಿನ ಮೇಲೆ ನಡೆದ ಅತ್ಯಾಚಾರ ಮತ್ತು ಕೊಲೆಯ ಆರೋಪಕ್ಕೆ ಅಪರಾಧಿಗೆ ಮತ್ತೆ ಮರಣದಂಡನೆಯ ಶಿಕ್ಷೆಯ ತೀರ್ಪನ್ನು ನೀಡಿರುವುದು ನ್ಯಾಯಾಂಗ ಈ ವಿಷಯದಲ್ಲಿ ಎಚ್ಚೆತ್ತುಕೊಂಡಿದೆಯೆಂಬುದರ ಸೂಚನೆಯೇ? ಸಾಮಾಜಿಕ ನ್ಯಾಯದ ರಕ್ಷಣೆಯ ಬಗ್ಗೆ ಸಾಕಷ್ಟು ಮಾತನಾಡುವ ನಮ್ಮ ನ್ಯಾಯಾಂಗ ಮತ್ತು ಶಾಸಕಾಂಗಗಳ ನಿದಾನ ನಡೆಯ ಕಾರ್ಯವೈಖರಿ ನ್ಯಾಯವನ್ನು 'ದುಬಾರಿ' ಯಾಗಿಸಿವೆ.

ಗುಜರಾತಿನ ಅಕ್ಕು ಯಾದವ್ ಕಳೆದ ಹದಿನಾಲ್ಕು ವರ್ಷಗಳಲ್ಲಿ ಇಪ್ಪತ್ತುನಾಲ್ಕು ಗುರುತರವಾದ ಅಪರಾಧಗಳನ್ನು ಎಸಗಿದ್ದರೂ ನ್ಯಾಯಾಂಗಕ್ಕೆ ಅವನಿಗೆ ಶಿಕ್ಷಿಸಲು ಸಾಧ್ಯವಾಗಿಲ್ಲವೆಂದರೆ ಏನರ್ಥ? ಅವನಿಗೆ ಕಸ್ತೂರಬಾ ಝೋಪಡಿ ಪಟ್ಟಿಯ ಮಹಿಳೆಯರು ಕಾನೂನನ್ನು ತಮ್ಮ ಕೈಗೆ ತೆಗೆದುಕೊಂಡು ಶಿಕ್ಷಿಸಿರುವ ರೀತಿಯಿಂದಲಾದರೂ ಇಂದು ನ್ಯಾಯಾಂಗ ತುರ್ತಾಗಿ ತಮ್ಮ ಜವಾಬ್ದಾರಿಯನ್ನು ಅರ್ಥಮಾಡಿಕೊಂಡು ಕಾರ್ಯನಿರ್ವಹಿಸಬೇಕಾಗಿದೆ.

ಇನ್ನು ರಾಜ್ಯಾಂಗವೇ ಕಾನೂನು ಮತ್ತು ಶಿಸ್ತಿನ ಹೆಸರಿನಲ್ಲಿ ಅತ್ಯಾಚಾರಿಗಳನ್ನು ಬೆಂಬಲಿಸುವಂತಹ ಸಂದರ್ಭಗಳು ಒದಗಿ ಬಂದರೆ ಹೆಣ್ಣಿಗೆ ನ್ಯಾಯ ಕನಸಿನ ಗಂಟು ಆಗಿಬಿಡಬಹುದು. ಮಣಿಪುರದ 'ಥಾಂಗ್ ಜಮ್ ಮನೋರಮಾ'ಳ ಮೇಲೆ ಅರೆಸೇನಾ ಸೈನಿಕರ ಪಡೆ ಎಸಗಿದ ದುಷ್ಕೃತ್ಯ ಇದೇ ಮೊದಲನೆಯದಲ್ಲವಾದರೂ, ಇಂತಹ ಹಲವಾರು ಘಟನೆಗಳಿಂದ ರೋಸಿ ಹೋದ ಅಲ್ಲಿನ ಮಹಿಳೆಯರು ತೋರಿಸಿದ ಅಪರೂಪದ ಪ್ರತಿಭಟನೆ ಸಮಸ್ಯೆಯ ಗಂಭೀರತೆಯನ್ನು ಸೂಚಿಸುತ್ತದೆ. ಅತ್ಯಾಚಾರಕ್ಕೊಳಗಾದ ಮನೋರಮಾ ಪೀಪಲ್ಸ್ ಲಿಬರೇಷನ್ ಆರ್ಮಿಯ ಸದಸ್ಯಳಾಗಿದ್ದಳೆಂಬ ಮಾತ್ರಕ್ಕೆ ಅವಳಿಗೆ ಅದೆಂತಹ ಶಿಕ್ಷೆ?

ಈ ಎಲ್ಲ ಮಾತುಗಳ ನಂತರವೂ ಮರಣದಂಡನೆಯ ಶಿಕ್ಷೆಯು ಅತ್ಯಾಚಾರಕ್ಕೆ ಪರಿಹಾರ ಎಂದು ಒಪ್ಪಬೇಕಿಲ್ಲ, ಆದರೆ ಇಂತಹ ಅನ್ಯಾಯಕ್ಕೆ ಒಳಗಾದವರಿಗೆ ನ್ಯಾಯ ದೊರಕಬೇಕಾದ ಪ್ರಕ್ರಿಯೆಯಲ್ಲಿ ನ್ಯಾಯಾಂಗ ಮತ್ತು ಶಾಸಕಾಂಗಗಳು ಹೆಚ್ಚು ಜವಾಬ್ದಾರಿಯುತವಾಗಿ ಕಾರ್ಯನಿರ್ವಹಿಸಬೇಕು ಮತ್ತು ಮಾಧ್ಯಮಗಳು ಸುದ್ದಿಯ ವೈಭವೀಕರಣದಲ್ಲಿ ಅಪರಾಧಿಗಳನ್ನು 'ಹೀರೋ' ಮಾಡಿ, ಬಲಿಪಶುಗಳನ್ನು ಮತ್ತಷ್ಟು ಶಿಕ್ಷಿಸದಿರಲಿ.

- ಎನ್. ಗಾಯತ್ರಿ

# ಜಾಗತೀಕರಣ ಮತ್ತು ಮಹಿಳಾ ಅಸ್ತಿತ್ವದ ಪ್ರಶ್ನೆ

– ಕವಿತಾ ರೈ ಬಿ.ಆರ್.

ಸಮಕಾಲೀನ ಸಂದರ್ಭದಲ್ಲಿ ಜಾಗತೀಕರಣದ ಪ್ರಕ್ರಿಯೆ ಎನ್ನುವುದು ಕೇವಲ ಆರ್ಥಿಕ ರಾಜಕೀಯ ಕ್ಷೇತ್ರಗಳಿಗೆ ಮಾತ್ರ ಸೀಮಿತಗೊಳ್ಳದೆ, ಅದು ವಿಶ್ವದ ಬಹುರೂಪಿ ರಾಜಕೀಯ, ಆರ್ಥಿಕ, ಸೈನಿಕ, ಬೌದ್ಧಿಕ ಹಾಗೂ ಸಂಸ್ಕೃತಿಗಳನ್ನು ಒಟ್ಟು ಸೇರಿಸಿ ಬೆರೆಸುತ್ತಿದೆ. ಇದರ ವಾಹಕವಾಗಿ ಕಾರ್ಯ ನಿರ್ವಹಿಸುತ್ತಿರುವ ಸಮೂಹ ಮಾಧ್ಯಮಗಳು ಜಾಗತೀಕರಣವನ್ನು ಅತಿಶಕ್ತವಾಗಿ ಹರಡಿಬಿಟ್ಟಿವೆ. ಆಧುನಿಕತೆಯ ಆತ್ಯಂತಿಕ ಸ್ವರೂಪವಾದ ಈ ಜಾಗತೀಕರಣವೆನ್ನುವುದು ಎಲ್ಲಾ ಅರ್ಥಗಳಿಂದಲೂ ಕಾಲದ ನಿರಂತರೆಯ ಸಂಕೇತ. (ಮಾರ್ಷಲ್ ಮೆಕ್‌ಬಹಾನ್ ಎನ್ನುವ ವಿದ್ವಾಂಸ ಬಹಳ ಹಿಂದೆಯೇ 'ಜಗತ್ತು ಒಂದು ಹಳ್ಳಿ'ಯಾಗುವ ಕಾಲದ ಚಲನಶೀಲತೆಯ ಬಗ್ಗೆ ಮಾತನಾಡಿದ್ದ) ಚಾರಿತ್ರಿಕವಾಗಿ ಜಾಗತೀಕರಣ ಎನ್ನುವುದು ಆರ್ಥಿಕ ಕ್ಷೇತ್ರದ ಖಾಸಗೀಕರಣ, ಉದಾರೀಕರಣದ ಪ್ರತಿಫಲದ ರೂಪ. ಆಧುನಿಕತೆಯ ಕೇಂದ್ರ ಬಿಂದುವಿನಿಂದ ರೂಪಿತಗೊಂಡ ಜಾಗತೀಕರಣವನ್ನು ಮೂಲ ಭೂತವಾಗಿ ಅರ್ಥೈಸಿಕೊಳ್ಳುವ, ಪರಿಣಾಮಗಳನ್ನು ಗುರುತಿಸುವ ಅಧ್ಯಯನಗಳು ಆರ್ಥಿಕ ಪಾತಳಿಯಿಂದ, ರಾಜಕೀಯ ಮೀಮಾಂಸೆಯಿಂದ, ಆಧುನಿಕತೆ ಮತ್ತು ಪರಂಪರೆಯನ್ನು ವಿಶ್ಲೇಷಿಸುವ ನೆಲೆಯಿಂದ, ಸಂಸ್ಕೃತಿಯ ಅನನ್ಯತೆಯ ಅರ್ಥೈಸುವಿಕೆಗಳಿಂದ ವಿಶ್ಲೇಷಣೆಗಳನ್ನು ಮುಂದಿಟ್ಟಿವೆ. ಆಯಾ ಕ್ಷೇತ್ರಗಳ ಪಲ್ಲಟಗಳ ಕೇಂದ್ರೀಯ ದೃಷ್ಟಿ ಕೋನಗಳಿಂದ ಜಾಗತೀಕರಣವು ವ್ಯಾಖ್ಯಾನಕ್ಕೆ ಒಳಪಟ್ಟಿದೆ. ಇವುಗಳ ಒಟ್ಟು ರೂಪದಲ್ಲಿ ಜಾಗತೀಕರಣ ಎದುರು ಮಾಡಿದ ಸಮಸ್ಯೆಯ ಸಂಕೀರ್ಣತೆಯು ಅಡಗಿದೆ. ಅಂದರೆ ಆರ್ಥಿಕ ಕ್ಷೇತ್ರದ ಖಾಸಗೀಕರಣ, ಉದಾರೀಕರಣದ ಮೂಲಕ ಬಂಡವಾಳಶಾಹಿ ಸಂಸ್ಕೃತಿಯು ಸಾರ್ವತ್ರಿಕರಣಗೊಳ್ಳುವುದು ಮತ್ತು ಎಲ್ಲಾ ರಾಷ್ಟ್ರ ಪ್ರಭುತ್ವಗಳು ಅಮೆರಿಕಾದ ಸಾರ್ವಭೌಮ ಚಕ್ರಾಧಿಪತ್ಯಕ್ಕೆ ಅಧೀನವಾಗಿ ಉಳಿಯುವ ರಾಜಕೀಯ ವ್ಯವಸ್ಥೆಯೊಂದು ನಿರ್ಮಾಣವಾಗುವುದು ಜಾಗತೀಕರಣದ ಬೆಳವಣಿಗೆಯ ಸಹಜ ಫಲಶೃತಿಯಾಗಿದೆ. ಈ ಬೆಳವಣಿಗೆಯು ಆಧುನಿಕ ಚರಿತ್ರೆಯ ನಿರ್ದಿಷ್ಟವಾದ ಪ್ರೇರಣೆಗಳ ಕಾರಣದಿಂದ ಅಲ್ಲದೆ ಅನುಕೂಲಕರ ಸನ್ನಿವೇಶಗಳಿಂದ ಉದ್ಭವಿಸಿದ ಸ್ಥಿತಿಯಾಗಿದೆ. ಜಾಗತೀಕರಣವೆಂಬ ಬಲೆಯು ವಿಶ್ವದ ಬಹುಮುಖಿ ಸಂಸ್ಕೃತಿಯನ್ನು ಏಕಕೇಂದ್ರಿಯ ಪ್ರಾಬಲ್ಯಕ್ಕೆ ಸಿಲುಕಿಸುವ ಪ್ರಕ್ರಿಯೆಯ ಎಳೆಗಳಲ್ಲಿ ಕೇವಲ ಆರ್ಥಿಕ ಮತ್ತು ರಾಜಕೀಯವೆಂಬ ಆಕಾರರೂಪಿ ಎಳೆಗಳನ್ನಷ್ಟೇ ಗಂಭೀರವಾಗಿ ಚರ್ಚಿಸಲಾಗುತ್ತಿದೆ. ಒಂದರ್ಥದಲ್ಲಿ ಆರ್ಥಿಕ ಮತ್ತು ರಾಜಕೀಯ ತರ್ಕಗಳನ್ನು ಸರಳವಾಗಿ ಉಳಿದ ಕ್ಷೇತ್ರಗಳಿಗೆ ಸಮೀಕರಿಸಲಾಗುತ್ತಿದೆ. ಪುರುಷ ನಿರ್ಮಿತ ಜಾಗತೀಕರಣದ ಸಂರಚನೆಯಲ್ಲಿ ಎಲ್ಲಾ ರೀತಿಯಿಂದಲೂ ಬಲಿ ಪಶುಗಳಾಗುತ್ತಿರುವ ಮಹಿಳೆಯರ ಜೀವನಕ್ರಮಗಳನ್ನು ಸರಳೀಕೃತಗೊಂಡ ದ್ವಂದ್ವ ತೀರ್ಮಾನಗಳಿಂದ ಗ್ರಹಿಸಲಾಗುತ್ತಿದೆ.

ಜಾಗತೀಕರಣದ ಹಾದಿಯಲ್ಲಿಯೂ ಸಹ ಅಂತಿಮವಾಗಿ, ಅನಿವಾರ್ಯವಾಗಿ ಪಾಲುದಾರರಾಗುವವರೆಂದರೆ ಮಹಿಳೆಯರು. ಸಂಖ್ಯೆಯಲ್ಲಿ ವಿಶ್ವದ ಅರ್ಧಭಾಗದಷ್ಟಿರುವ ಮಹಿಳೆಯರು ಚಾರಿತ್ರಿಕವಾಗಿ ಎಲ್ಲಾ ಸಂದರ್ಭಗಳಲ್ಲಿಯೂ ಪುರುಷರ ಅಧೀನತೆಯನ್ನು ಒಪ್ಪಿಕೊಳ್ಳಬೇಕಾಗಿರುವಂತೆ, ಜಾಗತೀಕರಣದ ಸಂದರ್ಭದಲ್ಲಿ ಒಪ್ಪಿಕೊಳ್ಳಬೇಕಾಗಿದೆ. ಪುರುಷ ನಿರ್ಮಿತ ಸಂಸ್ಕೃತಿ ಮತ್ತು ಅಧಿಕಾರಗಳ ತರ್ಕವೂ ಜಾಗತೀಕರಣದ ವಿಭಿನ್ನ ಸಂಭವನೀಯತೆಗಳನ್ನು ಮಹಿಳೆಯರನ್ನು ಸೇರಿಸಿಯೇ ಪೋಣಿಸಿದೆ. ಇಂಡಿಯಾದ ಮಹಿಳೆಯರ ಜೀವನಕ್ರಮದಲ್ಲಿ ಇದು ಎದುರು ಮಾಡಿದ ಸನ್ನಿವೇಶಗಳನ್ನು ಗಾಯತ್ರಿ ಸ್ಪಿವಾಕ್ ಅವರ 'ಎ ಕ್ರಿಟೀಕ್ ಆಫ್ ಪೋಸ್ಟ್ ಕಲೋನಿಯಲ್ ರೀಸನ್' ಎನ್ನುವ ಕೃತಿ ಮತ್ತು ಸೂಸನ್ ಒಕಿನ್ ಅವರ ಈಸ್ ಮಲ್ಟಿ ಕಲ್ಚರಿಸಂ ಬ್ಯಾಡ್ ಫಾರ್ ವಿಮೆನ್' ಕೃತಿಗಳು ದೀರ್ಘವಾಗಿ ಚರ್ಚಿಸಿವೆ. (ನನಗೆ ತಿಳಿದ ಮಟ್ಟಿಗೆ ಕನ್ನಡದ ಸಂದರ್ಭದಲ್ಲಿ ಇಷ್ಟು ಪರಿಪೂರ್ಣವಾದ ಚರ್ಚೆ ಗ್ರಂಥ ರೂಪದಲ್ಲಿ ಪ್ರಕಟಗೊಂಡಿಲ್ಲ).

ಸಮಾಜದ ತಳರಚನೆಯೇ ಆರ್ಥಿಕತೆ ಮತ್ತು ಆ ಮೂಲಕ ಸ್ಥಾಪಿತಗೊಳ್ಳುವ ಅಧಿಕಾರ (ರಾಜಕೀಯ)ವಾಗಿದೆ. ಇಂತಹ ತಳರಚನೆಯ ಬೆಳವಣಿಗೆಯನ್ನು ಆಧುನಿಕತೆಯ ಯುಗದಲ್ಲಿ ತಂತ್ರಜ್ಞಾನ ಮತ್ತು ವಿದ್ಯುನ್ಮಾನ ಮಾಧ್ಯಮಗಳು ಉತ್ಕರ್ಷವಾಗಿ ಅನಾವರಣಗೊಳಿಸುತ್ತಿವೆ/ ಮಾತ್ರವಲ್ಲದೆ ಹೊಸ ಸಾಮುದಾಯಿಕ ಪ್ರಜ್ಞೆಯೊಂದನ್ನು ಸಾರ್ವತ್ರಿಕವಾಗಿ ಕಟ್ಟಿಕೊಡುತ್ತಿವೆ. ಈ ಹಿನ್ನೆಲೆಯಲ್ಲಿ ಜಾಗತೀಕರಣದಿಂದ ಮಾತ್ರ ಸಮಾಜದ ಬಹುಮುಖಿ ಅಸ್ತಿತ್ವವನ್ನು ಪಲ್ಲಟಗೊಳಿಸಿ ಏಕರೂಪ ಸಮಾಜವನ್ನು ಕಟ್ಟಲು ಸಾಧ್ಯ. ವಿಶ್ವದ ಸಮಗ್ರ ಮಹಿಳೆಯರ ದೃಷ್ಟಿಯಿಂದ ಇಂತಹ ಏಕರೂಪಿ ಸಾಮಾಜಿಕ ಸಂದರ್ಭ ಅತ್ಯಗತ್ಯ. ಮಾತ್ರವಲ್ಲ ಬಹುಮುಖಿ ಸಂಸ್ಕೃತಿ ಮಹಿಳೆಯರ ಮುನ್ನಡೆಗೆ, ಏಕತೆಗೆ, ಸಾರ್ವತ್ರಿಕ ಹೋರಾಟಕ್ಕೆ ಪೂರಕ ಎಂದು ಸೂಸನ್ ಒಕಿನ್ ತನ್ನ ಕೃತಿಯಲ್ಲಿ ಚರ್ಚಿಸುವುದರ ಮೂಲಕವಾಗಿ ಜಾಗತೀಕರಣವನ್ನು ಸಮರ್ಥಿಸಿಕೊಳ್ಳುವುದು ವ್ಯಕ್ತವಾಗುತ್ತದೆ. ಜಾಗತೀಕರಣವನ್ನು 'ಲಿಂಗ ತಟಸ್ಥ' (Gender-Neutral)ವಾದ ಆರ್ಥಿಕ ನೀತಿ ಎಂದು ಪಶ್ಚಿಮದ ಆರ್ಥಿಕ ಸ್ತ್ರೀವಾದಿ ಚಿಂತಕರಾದ ಮಾರ್ಥಸಿ, ಮಿನ್ಸರ್ ಮತ್ತು ಪೊಲಾಚೆಕ್, ಕ್ಲಾರಾ ಹ್ಯಾನ್ಸಿ ಬೆಟ್ಟ ರಿಚ್ಚರ್ಡ್ಸ್ ಮೊದಲಾದವರು ವಿವರಿಸುತ್ತಾರೆ. ಆದರೆ 'ಲಿಂಗ ತಟಸ್ಥ'ವೆನ್ನುವ ಆದರ್ಶವೊಂದು ಸಾಕಾರಗೊಳ್ಳುವುದು ಮಹಿಳೆಯರ ಮತ್ತು

ಪುರುಷರ ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಂಸ್ಕೃತಿಕ ಸನ್ನಿವೇಶಗಳು ಸಮಾನಗೊಂಡಾಗ ಮಾತ್ರವೇ ಆಗಿರುತ್ತದೆ. ಚಾರಿತ್ರಿಕವಾಗಿ ಸ್ತ್ರೀ-ಪುರುಷರ ನಡುವೆ ಅಗಾಧವಾದ ಅಸಮಾನತೆ ಕಾಲದ ಚಲನೆಯ ಜೊತೆ ನಿರಂತರವಾಗಿ ಮುಂದು ವರಿದುಕೊಂಡು ಬಂದಿದೆ. ಇದು ಸಮಕಾಲೀನ ಸಮಾಜಗಳಲ್ಲೂ ಎದ್ದು ತೋರುವ ಸಂಗತಿಯಾಗಿದೆ. ಯಾವುದೇ ದೇಶದ ಆರ್ಥಿಕ ಸಂಹಿತೆಯೊಳಗೆ ಪುರುಷ ಮತ್ತು ಮಹಿಳೆಯರು ಸಮಾನ ಮಟ್ಟದಲ್ಲಿ ಕಂಡುಬರುವುದಿಲ್ಲ. ಹೀಗಾಗಿ ಜಾಗತೀಕರಣದ ನೀತಿ 'ಲಿಂಗ ತಟಸ್ಥ' ಎನ್ನುವುದು ಸಮೂಹ ಮಾಧ್ಯಮಗಳು ಹಲವಾರು ಕಾರಣಗಳಿಂದಾಗಿ (ಮುಖ್ಯವಾಗಿ ಆರ್ಥಿಕ, ರಾಜಕೀಯ ಕಾರಣಗಳಿಂದಾಗಿ) ಬಿಂಬಿಸುವ ವಾಸ್ತವದ 'ಭ್ರಮೆಯ ರೂಪ' ವಾಗಿದೆ. ಇಂತಹ ಭ್ರಮೆಯ ಪ್ರತಿಮೆಗಳು ಬಂಡವಾಳಶಾಹಿ ಪುರುಷ ವ್ಯವಸ್ಥೆಗೆ ಪೂರಕವಾಗಿ ಪ್ರತಿಬಿಂಬಿತಗೊಳ್ಳುತ್ತಿರುವುದನ್ನು ಮಹಿಳಾ ಪರ, ಜನಹಿತ ಪರ ಎಂದು ಪರಿಭಾವಿಸುವುದೇ ಅಪಾಯದ ಬೆಳವಣಿಗೆಯಾಗಿದೆ. ಮಾತ್ರವಲ್ಲ ಮಹಿಳಾವಾದದ ಮುಂದಿರುವ ಮಹತ್ವದ ಸವಾಲಾಗಿದೆ. ಜಾಗತೀಕರಣವೆಂಬ ಅನಪೇಕ್ಷಿತ ಬೆಳವಣಿಗೆಯು ಕಳೆದ ಹತ್ತು-ಹದಿನೈದು ವರ್ಷಗಳಲ್ಲಿ ಉಂಟು ಮಾಡಿದ ಪ್ರತಿಕೂಲತೆಯ ಪರಿಣಾಮ ಊಹನಾತೀತವಾದದ್ದು. ಜಾಗತೀಕರಣ ಮತ್ತು ಮಹಿಳಾ ಅಸ್ತಿತ್ವದ ಪ್ರಶ್ನೆ ಎನ್ನುವ ಈ ಲೇಖನದಲ್ಲಿ ಜಾಗತೀಕರಯಣದ ಪ್ರಕ್ರಿಯೆಯು ಮಹಿಳೆಯರ ಜೀವನ ಕ್ರಮದಲ್ಲಿ ಉಂಟುಮಾಡಿದ ಪರಿಣಾಮಗಳನ್ನು ನಿಖರವಾಗಿ ಗುರುತಿಸಿ ವಿಶ್ಲೇಷಿಸುವ ಪ್ರಯತ್ನವನ್ನು ನಡೆಸಲಾಗಿದೆ.

### ಜಾಗತೀಕರಣ ಮತ್ತು ಮಹಿಳಾ ಆರ್ಥಿಕತೆಯ ಹಿತಾಸಕ್ತಿಗಳು

ಸಮಕಾಲೀನ ಸಂದರ್ಭದಲ್ಲಿ ಲೇಬರ್ ಮಾರ್ಕೆಟಿಂಗ್ ಎನ್ನುವುದು ಆಧುನಿಕ ಆರ್ಥಿಕತೆಯ ಪ್ರಮುಖ ಅಂಶವಾಗಿದೆ. ಲೇಬರ್ ಮಾರ್ಕೆಟಿಂಗ್ ವ್ಯವಸ್ಥೆ ಶ್ರಮದ ಮಾರಾಟ ಮತ್ತು ಖರೀದಿಗೆ ಸಂಬಂಧಪಟ್ಟದ್ದು. ಮಾತ್ರವಲ್ಲ ಇದರ ಮೂಲಕ ಕೂಲಿ ಮತ್ತು ಕಾರ್ಮಿಕರ ಉದ್ಯೋಗದ ಮಟ್ಟವನ್ನು ನಿಗಧಿಗೊಳಿಸುವಂಥದ್ದು. ಅರ್ಥ ವ್ಯವಸ್ಥೆಯೊಂದರಲ್ಲಿ ಕಾರ್ಮಿಕರ ಪೂರೈಕೆಯನ್ನು ನಿರ್ಧರಿಸುವ ಅಂಶಗಳಲ್ಲಿ 'ಕಾರ್ಮಿಕರ ಲಿಂಗ' ಕೂಡ ಒಂದು. ಉದ್ಯೋಗದಲ್ಲಿನ ಲಿಂಗಾಧಾರ ವರ್ಗೀಕರಣವು ಪರಂಪರಾಗತವಾಗಿರುವುದರಿಂದಲೇ ಸಮಾಜದಲ್ಲೂ ಪುರುಷ ಮತ್ತು ಮಹಿಳೆಯರು ಕೈಗೊಳ್ಳುವ ಉದ್ಯೋಗಗಳಲ್ಲಿ ಮೂಲಭೂತ ವ್ಯತ್ಯಾಸವಿದೆ. ಉದ್ಯೋಗಗಳಲ್ಲಿನ ಈ ವ್ಯತ್ಯಾಸವು ಸಹಜವಾಗಿ ಆದಾಯದ, ಗಳಿಕೆಯ ನೆಲೆಯ ಅಸಮಾನತೆಗೆ ಕಾರಣವಾಗಿದೆ. ಇಂಡಿಯಾದಂತಹ ದೇಶಗಳಲ್ಲಿ ಪುರುಷ ಮತ್ತು ಮಹಿಳಾ ಕಾರ್ಮಿಕರ ನಡುವೆ ನಿಗದಿಗೊಳಿಸಲಾಗುವ ಕೂಲಿ (ವೇತನ)ಯಲ್ಲಿ ಅಂತರವಿದೆ. ಲೇಬರ್ ಮಾರ್ಕೆಟಿಂಗ್ ವ್ಯವಸ್ಥೆಯಲ್ಲಿ ಮಹಿಳೆಯರು ಹೆಚ್ಚಾಗಿ ಶ್ರಮ ಪ್ರಧಾನವಾದ ಉದ್ಯೋಗಗಳಲ್ಲಿ ಕಂಡುಬಂದರೆ, ಪುರುಷರು ಬಂಡವಾಳ ಪ್ರಧಾನವಾದ ಹುದ್ದೆಗಳಲ್ಲಿ ನೇಮಕಗೊಳ್ಳುತ್ತಾರೆ. ಪುರುಷರಿಗೆ ವೃತ್ತಿ ಭದ್ರತೆ, ಅಧಿಕ ವೇತನ ಲಭ್ಯವಾದರೆ, ಮಹಿಳೆಯರು ಕಡಿಮೆ ವೃತ್ತಿ ಭದ್ರತೆಯಲ್ಲಿ ಅಲ್ಪ ಪ್ರಮಾಣದ ವೇತನಕ್ಕೆ ಸೀಮಿತಗೊಂಡು ದುಡಿಯುತ್ತಿರುವುದು ವ್ಯಕ್ತವಾಗುತ್ತದೆ. ಹೊಸ ಮಿಲೀನಿಯಂ ಶತಮಾನದಲ್ಲಿಯೂ ಕೂಡ ಲೇಬರ್ ಮಾರ್ಕೆಟಿಂಗ್‌ನಲ್ಲಿ ಉತ್ತಮ ವೃತ್ತಿ ಭವಿಷ್ಯವಿರುವುದು ಪುರುಷರಿಗೆ ಮಾತ್ರವೇ ಆಗಿದೆ. ಮಹಿಳಾ ಕಾರ್ಮಿಕರಿಗೆ ಸಂಬಂಧಿಸಿದಂತೆ ಪುರುಷ ಪ್ರಧಾನ ಬಂಡವಾಳ ಶಾಹಿ ವ್ಯವಸ್ಥೆಯ ಅಸಮಾನ ಧೋರಣೆಗಳು ಹಲವು ನೆಲೆಗಳಲ್ಲಿ ಒಡೆದು ತೋರುವಂತಹದ್ದಾಗಿದೆ. ಅವುಗಳಲ್ಲಿ ಈ ಕೆಳಗಿನಂತೆ ಗುರುತಿಸಬಹುದು.

ಅ. ಸ್ತ್ರೀ-ಪುರುಷರ ನಡುವೆ ಏರ್ಪಟ್ಟಿರುವ ವೃತ್ತಿ ಪ್ರತ್ಯೇಕತೆ. (Occupational Segregation)

ಇ. ಮಹಿಳೆಯರನ್ನು ಏಕರೂಪತೆಯ ಹುದ್ದೆಗಳಲ್ಲಿ ಸ್ಥಿರಗೊಳಿಸಲಾಗಿರುವುದು.

ಉ. ಮಹಿಳಾ ಕಾರ್ಮಿಕರು ಬಡ್ತಿಯ ಅವಕಾಶದ, ಮೇಲ್ಮುಖವಾದ ಚಲನೆಯ ವೃತ್ತಿಗಳಿಂದ ವಂಚಿತರಾಗಿ ಒಂದೇ ವೃತ್ತಿಯಲ್ಲಿ ಸ್ಥಿರಗೊಂಡಿರುವುದು.

ಎ. ಮಹಿಳೆಯರು ಅಧಿಕ ದೈಹಿಕ ಶ್ರಮ ಮತ್ತು ಅಲ್ಪಕೂಲಿಯ ಕಾರ್ಮಿಕರಾಗಿ ಅಪಾರ ಸಂಖ್ಯೆಯಲ್ಲಿ ದುಡಿಯುತ್ತಿರುವುದು.

ಈ ಮುಖ್ಯ ಕಾರಣಗಳಿಂದಾಗಿ ಮಹಿಳಾ ಕಾರ್ಮಿಕರು ಅಸಂಘಟಿತ ಕ್ಷೇತ್ರಗಳಲ್ಲಿಯೇ ಅಪಾರವಾದ ಸಂಖ್ಯೆಯಲ್ಲಿ ಕೇಂದ್ರೀಕೃತಗೊಂಡಿದ್ದಾರೆ. (ಉದಾ : ಅಂಗಡಿ ಮಳಿಗೆಗಳಲ್ಲಿ ಸೇಲ್ಸ್‌ಗರ್ಲ್ಸ್‌ಗಳಾಗಿ ದುಡಿಯುತ್ತಿರುವ ದೇಶದ ಅಪಾರ ಸಂಖ್ಯೆಯ ಮಹಿಳಾ ಕಾರ್ಮಿಕರು.) ಮಾತ್ರವಲ್ಲದೆ, ಅಗತ್ಯವಿದ್ದಾಗ ನೇಮಕಗೊಳ್ಳುವ ಅಗತ್ಯವಲ್ಲದ ಸಂದರ್ಭಗಳಲ್ಲಿ ಹೊರ ದೂಡಬಹುದಾದ ಮೀಸಲು ಕಾರ್ಮಿಕ ಶಕ್ತಿಗಳಾಗಿ ಮಹಿಳೆಯರು ದುಡಿಯುತ್ತಿದ್ದಾರೆ. ಸಿಲ್ವಮನ್ ಮತ್ತು ಬಾಡ್ ಎನ್ನುವ ಅರ್ಥಶಾಸ್ತ್ರಜ್ಞರು ಮೀಸಲು ಮಹಿಳಾ ಕಾರ್ಮಿಕತೆಯನ್ನು ಮೂರು ನೆಲೆಗಳಲ್ಲಿ ಗುರುತಿಸಿದ್ದಾರೆ (1992).

1. ತಾತ್ಕಾಲಿಕವಾಗಿ ನಿರುದ್ಯೋಗಿಗಳಾಗಿರುವ ಮಹಿಳಾ ಕಾರ್ಮಿಕರು ಎಂದರೆ ಉದ್ಯೋಗದ ಅನ್ವೇಷಣೆಯಲ್ಲಿರುವ ಶಿಕ್ಷಿತ ಮಹಿಳೆಯರು.
2. ಕೃಷಿಕ್ಷೇತ್ರದ ಬಂಡವಾಳಶಾಹೀಕರಣದಿಂದಾಗಿ ಉದ್ಯೋಗದಿಂದ ವಂಚಿತರಾದ ಮಹಿಳಾ ಕಾರ್ಮಿಕರು.
3. ಅರೆ ಉದ್ಯೋಗಿಗಳಾಗಿರುವ ಆದರೆ ವರ್ಷದ ಹೆಚ್ಚುಕಾಲದವರೆಗೆ ನಿರುದ್ಯೋಗಿಗಳಾಗಿರುವ ಮಹಿಳಾ ಕಾರ್ಮಿಕರು. (ಉದಾ : ಜೂಸ್ ಫ್ಯಾಕ್ಟರಿ, ಐಸ್‌ಕ್ರೀಮ್ ಫ್ಯಾಕ್ಟರಿ, ಹನಿ

ಫ್ಯಾಕ್ಟರಿ ಇತ್ಯಾದಿಗಳಲ್ಲಿ ದುಡಿಯುವವರು.)

ಜಾಗತೀಕರಣದ ಸಂದರ್ಭದಲ್ಲಿ ಆದ ಮಹತ್ತ್ವದ ಪಲ್ಲಟವೆಂದರೆ ಲೇಬರ್ ಮಾರ್ಕೆಟಿಂಗ್‌ನಲ್ಲಿ ಅಪಾರ ಸಂಖ್ಯೆಯಲ್ಲಿ ದೇಶದ ಮಹಿಳಾ ಕಾರ್ಮಿಕ ಶಕ್ತಿಯ ಪಾಲುಗೊಳ್ಳುವಿಕೆಯಾಗಿದೆ. ಆದರೆ ಇದರಲ್ಲಿ ಕೂಡ ಮಹಿಳಾ ಕಾರ್ಮಿಕಳೊಬ್ಬಳ ಕೂಲಿಯು ಜೀವನಾಧಾರದ ಕನಿಷ್ಠ ಮಟ್ಟದಲ್ಲಿ ನಿರ್ಧರಿತಗೊಳ್ಳುತ್ತದೆ ಎನ್ನುವುದು ವಾಸ್ತವವಾಗಿದೆ. ಕಾರ್ಮಿಕ ಸಂಘಟನೆಗಳ ಸಹಾಯದಿಂದ ಪುರುಷ ಕಾರ್ಮಿಕರು ಗರಿಷ್ಠ ಕೂಲಿಯನ್ನು ಪಡೆದುಕೊಳ್ಳುವವರಾಗಿದ್ದಾರೆ ಎಂದು ಜಾಗತೀಕರಣದ ನಿಯೋ ಕ್ಲಾಸಿಕಲ್ ತತ್ವ ಹೇಳುತ್ತದೆ. ಆದರೆ ಮಹಿಳಾ ಕಾರ್ಮಿಕರಿಗೆ ಸಂಬಂಧಿಸಿದಂತೆ ನಿಯೋ ಕ್ಲಾಸಿಕಲ್ ತತ್ವ ಭ್ರಮೆಯ ಪ್ರತಿಮೆಯಾಗಿದೆ. ಕನಿಷ್ಠ ಕೂಲಿಯ, ಪದೋನ್ನತಿಗೆ ಅವಕಾಶವಿಲ್ಲದ, ಉತ್ತಮ ವೃತ್ತಿಭದ್ರತೆ ಇಲ್ಲದ ಸ್ಥಗಿತ ವೃತ್ತಿ ಸ್ವರೂಪದ ಹುದ್ದೆಗಳಲ್ಲಿ ಇಂಡಿಯಾದ ಗರಿಷ್ಠ ಮಹಿಳಾ ಕಾರ್ಮಿಕರು ದುಡಿಯುತ್ತಿರುವುದು ವ್ಯಕ್ತವಾಗುವ ನೈಜ ಅಂಶವಾಗಿದೆ. ಇದು ಕಾರ್ಮಿಕ ಕ್ಷೇತ್ರದಲ್ಲಿ ಪುರುಷ ಮತ್ತು ಮಹಿಳೆಯರಲ್ಲಿ ಯಾವ ಸಂದರ್ಭಗಳಲ್ಲೂ ಪರಿಪೂರ್ಣ ಪೈಪೋಟಿ ಹುಟ್ಟಿಕೊಂಡಿರಲೇ ಇಲ್ಲ ಎಂಬುದನ್ನು ಸಾಬೀತು ಪಡಿಸುತ್ತದೆ.

### ಜಾಗತೀಕರಣ ಮತ್ತು ಮಹಿಳೆಯರ ರಾಜಕೀಯ ಸ್ವಾಯತ್ತತೆ

ಸಮಾನತೆ, ನ್ಯಾಯ, ರಾಜಕೀಯ ಸ್ವಾಯತ್ತತೆಯ ನೆಲೆಯಿಂದ ಪರ್ಯಾಯ ರಾಜಕೀಯ ಪ್ರಜ್ಞೆಯನ್ನು ಹುಟ್ಟು ಹಾಕುವ ವಿದ್ಯಮಾನವಾಗಿ ಜಾಗತೀಕರಣ ಪ್ರತಿಬಿಂಬಿತಗೊಂಡಿದೆ. ಅಷ್ಟೇ ಅಲ್ಲದೆ ರಾಷ್ಟ್ರ ಪ್ರಭುತ್ವದ ಎಲ್ಲೆಗಳನ್ನು ಒರೆಸಿಹಾಕುವ ಜಾಗತಿಕ ಪ್ರಭುತ್ವವನ್ನು ಇದು ಸಾರುತ್ತದೆ. ಇಡೀ ಭೂಗೋಳವನ್ನು ಅಮೆರಿಕಾದ ಅಪಾರ ಹಣಶಕ್ತಿ ಜಾಗತಿಕ ಮಟ್ಟದಲ್ಲಿ ಸಮತಾವಾದಿ ವಿರೋಧಿ ನಿಲುವಾಗಿ ಅಥವಾ 'Anti-Communist Stance' ಆಗಿ ಕಟ್ಟುತ್ತಿದೆ. ಆಳುವ ವರ್ಗದವರು ತಮ್ಮ ಅನುಕೂಲಕ್ಕೆ ತಕ್ಕಂತೆ ಪ್ರಜಾಪ್ರಭುತ್ವವನ್ನು ಬಳಸಿಕೊಳ್ಳುತ್ತಿರುವ ಸನ್ನಿವೇಶದಲ್ಲಿ ರಾಜಕೀಯವಾಗಿ ಮಹಿಳಾ ಸಮಾನತೆಯು ರ್‍ಯಾಡಿಕಲ್ ಪ್ರಜಾಪ್ರಭುತ್ವ (Radical democracy)ದ ಒಳಗೆ ಅರ್ಥ ಕಳೆದುಕೊಳ್ಳುತ್ತಿದೆ. ಜಾಗತೀಕರಣವೆಂಬ ಸಂದರ್ಭವು ಜಗತ್ತಿನ ರಾಷ್ಟ್ರಗಳನ್ನು ಮಾರುಕಟ್ಟೆಗಳನ್ನಾಗಿ ಅಥವಾ ಕಚ್ಚಾವಸ್ತುಗಳ ಪೂರೈಕೆದಾರರನ್ನಾಗಿ ಪರಿವರ್ತಿಸ ಬಯಸುವ ಬಂಡವಾಳಶಾಹಿ ಶಕ್ತಿ (ಅಮೆರಿಕಾದ ಪ್ರಜಾಪ್ರಭುತ್ವ)ಗಳ ಆಮಿಷಗಳನ್ನು ಪೂರೈಸುವ ರಾಜಕೀಯ ವ್ಯವಸ್ಥೆಯಾಗಿದೆ. ಇಂತಹ ಪರಿಸ್ಥಿತಿಯಲ್ಲಿ ದೇಶೀಯ ರಾಜಕೀಯ ನೆಲೆಯಲ್ಲಿ ಸಮಾನವಾದ ಸೂಕ್ತ ಪ್ರತಿನಿಧಿತ್ವ ಸಿಗದ, ಮೀಸಲಾತಿಯಿಂದಲೇ ಭವಿಷ್ಯ ರೂಪಿಸಿಕೊಳ್ಳಬೇಕಾದ ಅನಿವಾರ್ಯತೆ ಇರುವ ಮಹಿಳೆಯರು ಮುಂದಿನ ಶತಮಾನದಲ್ಲಿಯೇ ಆದರೂ ಪುರುಷನಿಗೆ ಸಮಾನವಾಗಿ ರಾಜಕೀಯದ ಚುಕ್ಕಾಣಿಯನ್ನು ಹಿಡಿಯುವುದು ಅಸಾಧ್ಯವೆಂಬಂತೆ ತೋರುತ್ತದೆ. ಸಮಕಾಲೀನ ಸಂದರ್ಭದಲ್ಲಿ ಪುರುಷರ ಪ್ರಭುತ್ವ ಒತ್ತಾಯದಿಂದ, ಬಲ ಪ್ರಯೋಗದಿಂದ ಮಹಿಳೆಯರಲ್ಲಿ ಅಭಿಪ್ರಾಯಗಳನ್ನು ಹುಟ್ಟು ಹಾಕುವ ಬದಲಾಗಿ ತನ್ನ ಅಗಾಧವಾದ ಪ್ರಚಾರ ವ್ಯವಸ್ಥೆಯನ್ನು ಬಳಸಿಕೊಂಡು ತನ್ನ ಸ್ವಂತದ ಅಭಿಪ್ರಾಯವನ್ನು ಮಹಿಳೆಯರ ಅಭಿಪ್ರಾಯ ಕೂಡ ಎಂಬುದಾಗಿ ಒಪ್ಪಿಸುವಂತೆ ಮಾಡುತ್ತದೆ. ಇದು ನೋಮ್ ಚಾಮ್‌ಸ್ಕಿ ಗುರುತಿಸುವಂತೆ 'ಜಾಗತೀಕರಣವೆಂಬುದು ಒಪ್ಪಿಗೆಯನ್ನು ಉತ್ಪಾದಿಸುವ ವ್ಯವಸ್ಥೆ'ಯಾಗಿದೆ. ಇದರ ಒಳಗೆ ಮಹಿಳೆಯರ, ಅಲ್ಪಸಂಖ್ಯಾತರ, ಅಂಚಿಗೆ ಸರಿಸಲಾದವರ ಹೀಗೆ ಯಾವುದೇ ರೀತಿಯ ದುರ್ಬಲರ ಅಭಿಪ್ರಾಯಗಳಿರಲಿ ತರ್ಕದ ಪರೀಕ್ಷೆಗೆ ಅಥವಾ ವಾಸ್ತವದ ಒರೆಗಲ್ಲಿಗೆ ಒಳಪಡದೆ ಹಿಂಗಿ ಹೋಗುತ್ತದೆ. ಮಾತ್ರವಲ್ಲ ಪ್ರಭುತ್ವದ ರಾಜಕಾರಣವನ್ನು ಪ್ರಶ್ನೆ ಮಾಡುವ ಅವಶ್ಯಕತೆಯೂ ಇಲ್ಲದಂಥ ಕಾಮನ್‌ಸೆನ್ಸ್ ಅಭಿಪ್ರಾಯಗಳಾಗಿ ಬಿಡುತ್ತವೆ. ಇಂಡಿಯಾದ ಪ್ರಭುತ್ವ IMF, W.B., W.T.O. ಇವುಗಳು ರೂಪಿಸಿದ ಒಪ್ಪಂದಗಳಿಂದಾಗಿ ಮುಕ್ತಮಾರುಕಟ್ಟೆ, ಖಾಸಗೀಕರಣ ಇತ್ಯಾದಿಗಳನ್ನು ಅನಿವಾರ್ಯವಾಗಿಸಿದೆ. ಇದರೊಳಗೆ ಸಿಲುಕಿಕೊಂಡಿರುವ ಸಮಗ್ರ ಮಹಿಳೆಯರ ಬದುಕು ಅಖೈರಾಗಿ ಋಣಾತ್ಮಕ ಪರಿಣಾಮಗಳನ್ನಷ್ಟೇ ಅನುಭವಿಸಬೇಕಾಗಿದೆ. (ಇದರ ಬಗ್ಗೆ ರಾಬ್ರಿದೇವಿ, ಮಾಯಾವತಿ, ಜಯಲಲಿತಾ, ಸುಷ್ಮಾ ಸ್ವಾರಜ್, ಸೋನಿಯಾಗಾಂಧಿ ಇತ್ಯಾದಿ ಹಲವು ಪಕ್ಷದ ಮಹಿಳಾ ನಾಯಕರು ಪ್ರಶ್ನೆ ಮಾಡುವ ಅವಶ್ಯಕತೆಯೂ ಇಲ್ಲದಂಥ ಕಾಮನ್‌ಸೆನ್ಸ್ ಅಭಿಪ್ರಾಯಗಳಾಗಿ ಸ್ವೀಕರಿಸಿಬಿಟ್ಟಿದ್ದಾರೆ.) ಪ್ರಜಾಪ್ರಭುತ್ವದಲ್ಲಿ ರಾಜಕೀಯವಾಗಿ, ಆರ್ಥಿಕವಾಗಿ ತನ್ನದಾದ ಏನನ್ನೂ ಸಾಧಿಸಿಕೊಳ್ಳಲು ಸಾಧ್ಯವಾಗದ ಮಹಿಳೆರಿಗೆ ಜಾಗತಿಕ ಸರಕಾರ, ಜಾಗತಿಕ ಆಳ್ವಿಕೆಯಲ್ಲಿ ಸಿಕ್ಕಿದ್ದರೆ ಈಗಾಗಲೇ ಶತಮಾನಗಳಿಂದ ದಕ್ಕಿಸಿಕೊಂಡ ಶೋಷಣೆಯ ಮೇಲೆ ಮತ್ತೊಂದಷ್ಟು ಶೋಷಣೆಯೇ ಸಿಕ್ಕಿದೆ.

ಜಾಗತೀಕರಣದ ರಾಜಕೀಯ ಅವಕಾಶದ ಮುಕ್ತನೀತಿಯ ಪುರುಷ ಮತ್ತು ಮಹಿಳೆಯರಲ್ಲಿ ತೀವ್ರವಾದ ಪೈಪೋಟಿಗೆ ಕಾರಣವಾಗಿದೆ ಎನ್ನುವ ಅಭಿಪ್ರಾಯ ಪ್ರಚಲಿತದಲ್ಲಿ ಇದೆ. ಆದರೆ ಇಂಡಿಯಾದ ಹೆಚ್ಚು ಮಹಿಳೆಯರು ಪ್ರಾಥಮಿಕ ಶಿಕ್ಷಣದಿಂದಲೂ ವಂಚಿತರಾದವರು. ಇವರಿಗೆ ಸಿಕ್ಕ ರಾಜಕೀಯ ಅವಕಾಶ, ಮಧ್ಯಮವರ್ಗದ ಶಿಕ್ಷಿತ ಮಹಿಳೆಯರ ರಾಜಕೀಯ ಪ್ರತಿನಿಧೀಕರಣ, ಮೇಲ್ವರ್ಗದ ಮಹಿಳೆಯರ ರಾಜಕೀಯ ಅಧಿಕಾರವೆಲ್ಲ ಸಂಪೂರ್ಣವಾಗಿ ಪುರುಷ ನಿರೂಪಿತವೇ ಆಗಿದೆ. ಹೆಚ್ಚಿನ ಸಂಖ್ಯೆಯಲ್ಲಿ ಗ್ರಾಮ ಪಂಚಾಯಿತಿ, ತಾಲೂಕು ಪಂಚಾಯಿತಿ, ಮಂಡಲ ಪಂಚಾಯಿತಗಳಲ್ಲಿ ಕಂಡುಬರುವ ಮಹಿಳೆಯರು ನಡೆಸುವ ರಾಜಕಾರಣವೇನಿದೆ ಅದು ಮಹಿಳೆಯರಿಂದ ಪುರುಷರಿಗಾಗಿ ನಡೆಸುವ ಪುರುಷರ ರಾಜಕಾರಣವಾಗಿದೆ. ಇಂಥ ವಾಸ್ತವವನ್ನು ಮಹಿಳಾ ಪ್ರತಿನಿಧಿಗಳೆಲ್ಲರೂ ಮಹಿಳೆಯರಿ

ಗಾಗಿಯೇ ಎನ್ನುವಂತೆ ಮಾಧ್ಯಮಗಳು ಬಿಂಬಿಸುತ್ತಿವೆ. ವರ್ತಮಾನದ ರಾಜಕೀಯ ಸಂದರ್ಭ ನಿಜವಾಗಿಯೂ ಮಹಿಳಾ ಪ್ರಗತಿಪರ ಆಂದೋಲನಗಳ ಮುಂದಿರುವ ಸಂಕೀರ್ಣ ಸನ್ನಿವೇಶವಾಗಿದೆ. ಮಾತ್ರವಲ್ಲ ಇದನ್ನು ಗ್ರಹಿಸುವ ಬಗೆಯಲ್ಲಿಯೇ ದಿಕ್ಕು ತಪ್ಪುವ ಸ್ಥಿತಿ ಕಂಡುಬರುತ್ತದೆ. ಜಾಗತೀಕರಣವೆನ್ನುವುದು ಎಲ್ಲರನ್ನು ಒಳಗೊಂಡ ಸಿದ್ಧಾಂತವಲ್ಲ. ಇದು ಕೆಲವರಿಗಾಗಿ ಹೆಚ್ಚಿನವರನ್ನು ಹೊರಗಿಡುವ ಸಿದ್ಧಾಂತವಾಗಿದೆ. (Theory of Execusion) ತೋರಿಕೆಯ ಮಟ್ಟಿಗೆ ಈ ಮಾದರಿ 'ಸಮ ಸುಖಿ ರಾಜ್ಯ'ದ ಆದರ್ಶವಿಟ್ಟುಕೊಂಡಿದೆ. ಆದರೆ ತಳರಚನೆಯ ಸಮಷ್ಟಿಹಿತದ ಸಾಮಾಜಿಕ ತಾತ್ತ್ವಿಕತೆಯೇ ಸೊರಗಿದೆ.

### ಜಾಗತೀಕರಣ ಮತ್ತು ಮಹಿಳೆಯರ ಕೌಟುಂಬಿಕ ಸ್ವರೂಪ

ಪುರುಷ ಪ್ರಧಾನ ಬಂಡವಾಳಶಾಹಿ ವ್ಯವಸ್ಥೆ ಮತ್ತು ಪಿತೃಪ್ರಧಾನ ಕುಟುಂಬ ವ್ಯವಸ್ಥೆಯೇ ಮಹಿಳೆಯರ ಹಿಂದುಳಿದ ಜೀವನಕ್ರಮಕ್ಕೆ, ಅಲ್ಪಪ್ರಮಾಣದ ಗಳಿಕೆಗೆ ಕಾರಣವೆಂದು ಮಾರ್ಕ್ಸ್‌ವಾದಿ ಅರ್ಥಶಾಸ್ತ್ರಜ್ಞರ ಅಭಿಪ್ರಾಯವಾಗಿದೆ. ಪಿತೃ ಪ್ರಧಾನ ಕುಟುಂಬದ ವ್ಯವಸ್ಥೆಯಲ್ಲಿ ಮಹಿಳೆಯರಿಗೆ ಇರುವ ಸ್ಥಾನ ದ್ವಿತೀಯ ದರ್ಜೆಯದ್ದು. ಪುರುಷರು ಮಾತ್ರ ಪ್ರಮುಖ ಆದಾಯ ಗಳಿಕೆದಾರನೆಂದೂ ಮತ್ತು ಮಹಿಳೆಯರು ಕುಟುಂಬದ ನಿರ್ವಹಣೆಗೆ ಸಂಪೂರ್ಣ ಜವಾಬ್ದಾರರೆಂದು ಪಿತೃಸತ್ತೆ ಪರಿಗಣಿಸುತ್ತದೆ. ಇಂತಹ ಕುಟುಂಬ ಸಂರಚನೆಯು ಮಹಿಳೆಯರು ಕಾರ್ಮಿಕರಾಗುವುದನ್ನು ನಿರ್ದಿಷ್ಟ ಕಾರಣಗಳಿಂದ ಮಾತ್ರ ಒಪ್ಪಿಕೊಳ್ಳುತ್ತದೆ.

1. ಕುಟುಂಬದಲ್ಲಿ ಗಳಿಸುವ ಪುರುಷ ರೋಗಿಷ್ಠ ಅಥವಾ ಮರಣಕ್ಕೆ ತುತ್ತಾದ ಸಂದರ್ಭ.
2. ಕುಟುಂಬದ ಒಟ್ಟು ಅಗತ್ಯಗಳನ್ನು ಪೂರೈಸಲು ಪುರುಷನಿಗೆ ಅಸಾಧ್ಯವಾಗುವ ಸನ್ನಿವೇಶ.
3. ಕುಟುಂಬದಲ್ಲಿ ಪುರುಷನು ತನ್ನ ಆದಾಯವನ್ನು ಹಂಚಿಕೊಳ್ಳಲು ಸಿದ್ಧನಿಲ್ಲದಿರುವುದು. (ಮದ್ಯಪಾನ, ದುಶ್ಚಟ, ಸ್ವಾರ್ಥಗಳ ಕಾರಣಗಳಿಂದ) ಇಂತಹ ಕುಟುಂಬಗಳ ಮಹಿಳೆಯರ ಮತ್ತು ಮಕ್ಕಳ ಜೀವನ ಮಟ್ಟವು ಅತ್ಯಂತ ತಳಮಟ್ಟದಲ್ಲಿರುತ್ತದೆ. ಅಲ್ಲದೆ ಮಹಿಳೆಯರ ಕಾರ್ಮಿಕತೆಗೆ ಪ್ರೋತ್ಸಾಹ ದೊರಕುತ್ತದೆ.

ಪಿತೃಪ್ರಧಾನ ವ್ಯವಸ್ಥೆಯು ಮಹಿಳೆಯರನ್ನು ನಿರಂತರವಾಗಿ ಪುರುಷರ ಅವಲಂಬಿಯಾಗಿಯೇ ಇರಿಸುವ ಕಾರಮದಿಂದಾಗಿ ಹೆಣ್ಣು ಮತ್ತು ಗಂಡು ಮಕ್ಕಳಿಗೆ ನೀಡುವ ಶಿಕ್ಷಣದಲ್ಲಿಯೇ ಮೂಲಭೂತ ವ್ಯತ್ಯಾಸವನ್ನು ಕುಟುಂಬ ಮಾಡುತ್ತದೆ. ಹೆಚ್ಚಿನ ಕುಟುಂಬಗಳಲ್ಲಿ ಹೆಣ್ಣುಮಕ್ಕಳಿಗೆ ವೃತ್ತಿಪರ ಶಿಕ್ಷಣ, ವೃತ್ತಿ ಕೌಶಲ ಶಿಕ್ಷಣವನ್ನು ನೀಡುವುದರ ಬಗ್ಗೆ ಸಹಮತವಿರುವುದಿಲ್ಲ. ಮಹಿಳೆಯರ ಶಿಕ್ಷಣ ಮತ್ತು ತರಬೇತಿಗೆ ಬಂಡವಾಳ ಹೂಡಲು ಯಾವುದೇ ಪ್ರೇರಣೆಗಳಿಲ್ಲ. ಜಾಗತೀಕರಣದ ನಿಯೋ- ಕ್ಲಾಸಿಕಲ್ ತತ್ವ ನಿರೂಪಕರ ಪ್ರಕಾರ ಮಹಿಳೆಯರು ಪುರುಷರಿಗಿಂತ ಕಡಿಮೆ ದುಡಿಯುತ್ತಾರೆ. ಕಾರಣವೇನೆಂದರೆ ಮಹಿಳೆಯರಲ್ಲಿ ಸೂಕ್ತ ಶಿಕ್ಷಣ ತರಬೇತಿ ಹಾಗೂ ಉದ್ಯೋಗ ಅನುಭವ ಎಲ್ಲವೂ ಕಡಿಮೆ ಇರುವುದು. ಇಂತಹ ಸ್ಥಿತಿಗೆ ಕುಟುಂಬದಲ್ಲಿ ಹೆಣ್ಣು ಮಕ್ಕಳ ಶಿಕ್ಷಣ ಮತ್ತು ಉದ್ಯೋಗಕ್ಕೆ ಸಂಬಂಧಿಸಿದ ಪ್ರತಿಗಾಮಿ ಧೋರಣೆಯೇ ಕಾರಣವಾಗಿದೆ. ಇದರಿಂದಾಗಿ ಹೆಚ್ಚಿನ ಸಂಖ್ಯೆಯ ಮಹಿಳಾ ಕಾರ್ಮಿಕರು ವೃತ್ತಿ ಭವಿಷ್ಯವಿಲ್ಲದೆ ನಲುಗಬೇಕಾಗುತ್ತದೆ. ಕುಟುಂಬ ಹಾಗೂ ಲೇಬರ್ ಮಾರ್ಕೆಟಿಂಗ್ ವ್ಯವಸ್ಥೆಯಲ್ಲಿ ಮಹಿಳೆಯರ ಅಧೀನ ಸ್ಥಿತಿಯು ಪರಸ್ಪರ ಅಂತರ್‌ಸಂಬಂಧಿ ಅಂಶವಾಗಿ ಪ್ರಕಟಗೊಳ್ಳುತ್ತದೆ. ಮಹಿಳಾ ಕಾರ್ಮಿಕರು ಉತ್ಪಾದನೆ ಮತ್ತು ಪ್ರಜನನ ಕಾರ್ಯ ಎರಡರಲ್ಲೂ ಪಾಲ್ಗೊಳ್ಳಬೇಕು ಎನ್ನುವುದನ್ನು ಪುರುಷ ಪ್ರಧಾನ ಕುಟುಂಬವಾಗಲಿ, ಉದ್ಯಮವಾಗಲಿ ಗಂಭೀರವಾಗಿ ಪರಿಗಣಿಸಿಯೇ ಇಲ್ಲ. ಮಹಿಳೆಯರಿಗೆ ಕೌಟುಂಬಿಕ ಜವಾಬ್ದಾರಿಗಳು ಹೆಚ್ಚಾದಂತೆ ಅವರಿಗೆ ಉದ್ಯೋಗದಲ್ಲಿ ಮುಂದುವರಿಯುವ ಭದ್ರತೆಯನ್ನು ಕುಟುಂಬವಾಗಲಿ, ಉದ್ಯಮಪತಿಗಳಾಗಲಿ ನೀಡುವುದಿಲ್ಲ. ಬದಲಾಗಿ ಉದ್ಯೋಗವನ್ನು ತೊರಯುವಂಥ ನಿರೀಕ್ಷೆಗಳನ್ನು, ಒತ್ತಡಗಳನ್ನು ಮಹಿಳೆಯರ ಮೇಲೆ ಹೇರಲಾಗುತ್ತದೆ. ಗೃಹ ಉದ್ಯಮ, ಸಣ್ಣ ಕೈಗಾರಿಕೆ ಎನಿಸುವ ಊದುಬತ್ತಿ ತಯಾರಿಕೆ, ಅಣಬೆಕೃಷಿ, ಗಾರ್ಮೆಂಟ್ ಉದ್ಯಮ (ಟೈಲರಿಂಗ್), ಬಿಸ್ಕೆಟ್ ಕಾರ್ಖಾನೆ, ಗೇರು ಬೀಜ ಕಾರ್ಖಾನೆ, ಹೋಂ ಫುಡ್ ಇಂಡಸ್ಟ್ರೀಯಲ್ಲಿ ದುಡಿಯುತ್ತಿರುವ ಬಹುಸಂಖ್ಯಾತ ಮಹಿಳಾ ಕಾರ್ಮಿಕರಿಗೆ ವೃತ್ತಿ ಭವಿಷ್ಯವಿಲ್ಲ. ಅವರ ವರಮಾನಗಳಿಂದಲೇ ಕುಟುಂಬಗಳು ಸಾಗುತ್ತಿದ್ದರೂ ಸಮಾಜದಲ್ಲಿ ಅವರ ಉದ್ಯೋಗಗಳಿಗೆ ವಿಶೇಷ ಗೌರವ ಸಿಗುತ್ತಿಲ್ಲ. ಕುಟುಂಬವು ಕೂಡ ಮಹತ್ವದ ಪ್ರೋತ್ಸಾಹ ನೀಡುವುದಿಲ್ಲ. ಶಿಕ್ಷಕಿ, ಟೈಪಿಸ್ಟ್, ಸ್ವಾಗತಕಾರಿಣಿ, ಗುಮಾಸ್ತೆ, ನರ್ಸ್, ಪ್ರಯೋಗಾಲಯ ಸಹಾಯಕಿ, ದೂರವಾಣಿ ಆಪರೇಟರ್ ಮೊದಲಾದ ಮಧ್ಯಮ ದರ್ಜೆಯ ಹುದ್ದೆಗಳಲ್ಲಿ ದುಡಿಯುತ್ತಿರುವ ಸುಶಿಕ್ಷಿತ ಮಹಿಳೆಯರ ಕೌಟುಂಬಿಕ ಹಾಗೂ ಉದ್ಯೋಗದ ಸ್ಥಿತಿಗತಿಗಳಲ್ಲಿ ಗಮನಾರ್ಹ ಬೆಳವಣಿಗೆಯನ್ನು ಗುರುತಿಸುವುದು ಸಾಧ್ಯವಾಗುವುದಿಲ್ಲ. ಖಾಸಗೀ ಕ್ಷೇತ್ರಗಳಲ್ಲಿ, ಕಂಪ್ಯೂಟರ್ ಸಾಫ್ಟ್ ವೇರ್ ಕ್ಷೇತ್ರಗಳಲ್ಲಿ ಉನ್ನತ ಹುದ್ದೆಯಲ್ಲಿರುವ ಮಹಿಳೆಯರಿಗೆ ಸಹ ಭದ್ರತೆಯ ನೆಲೆಯಿಂದ ವೃತ್ತಿ ಭವಿಷ್ಯವನ್ನು ಊಹಿಸುವುದು ಅಸಾಧ್ಯವಾಗಿರುವ ಸಂದರ್ಭವಿದಾಗಿದೆ.

ಜಾಗತೀಕರಣದ ಶಕ್ತಿಗಳು 'ಜಗತ್ತೇ ಹಳ್ಳಿ'ಯಾಗಿ ಮಾರ್ಪಾಡುಗೊಳ್ಳುತ್ತಿದೆ ಎಂದು ಪರಿಭಾವಿಸುವ ಕಲ್ಪನೆಯ ಒಳಗೆ ನಿಜವಾದ ಹಳ್ಳಿಗಳು ಗೈರು ಹಾಜರಾಗಿದೆ. ಹಳ್ಳಿಗಳ ಬಡ ರೈತರ ಕುಟುಂಬಗಳ ಮಹಿಳೆಯರ ಸ್ಥಿತಿ ಅತೀ ಧಾರುಣವಾಗಿದೆ.

ಕೃಷಿ ಕ್ಷೇತ್ರದಲ್ಲಿ ಬಂಡವಾಳಶಾಹಿತ್ವದ ಪ್ರವೇಶದಿಂದಾಗಿ ಕೃಷಿ ಮತ್ತು ಹೈನುಗಾರಿಕೆಯನ್ನೇ ಆಶ್ರಯಿಸಿದ ಕುಟುಂಬಗಳ ಒಳಗಿರುವ ಬಡತನ, ಪುರುಷರ ಸಾಲ, ದಿವಾಳಿತನ, ಅವರ ಆತ್ಮಹತ್ಯೆ ಇಂಥವುಗಳಿಂದ ಮಕ್ಕಳನ್ನು ಸಾಕುವ ಜವಾಬ್ದಾರಿಗಳಿಂದ ಹಳ್ಳಿಯ ಬಡರೈತ ಹೆಣ್ಣು ಮಕ್ಕಳು ತತ್ತರಿಸಿ ಹೋಗಿದ್ದಾರೆ. ಕುಟುಂಬದ ಒಳಗೆ ಮಹಿಳೆಯರಿಗೆ ಸಿಗಬೇಕಾದ ಭದ್ರತೆ ಹೇಳಹೆಸರಿಲ್ಲದೆ ಮಾಯವಾಗಿರುವ ಸ್ಥಿತಿ ಇದಾಗಿದೆ. ಹೀಗಾಗಿ ಜಾಗತೀಕರಣ ಇಂಡಿಯಾದ ಸ್ವಾವಲಂಬೀ ಅರ್ಥವ್ಯವಸ್ಥೆಯನ್ನೇ ಸಿಡಿಸಿ ಛಿದ್ರಗೊಳಿಸಿವೆ. ಕೌಟುಂಬಿಕವಾಗಿ ಮಹಿಳೆಯರಿಗೆ ಈಗ 'ವರ್ತಮಾನ'ದ ಬದುಕೇ ಇಲ್ಲವಾಗಿ ಬಿಟ್ಟಿದೆ. ಜಾಗತೀಕರಣದ ಪ್ರಕ್ರಿಯೆಯು ಪಲ್ಲಟಗೊಳಿಸಿದ ಸಮಕಾಲೀನ ಬದುಕಿನಲ್ಲಿ ಮಹಿಳೆಯರ ಕೈಯಲ್ಲಿ ವರ್ತಮಾನ ಮತ್ತು ಭವಿಷ್ಯ ಎರಡೂ ಉಳಿದಿಲ್ಲ. ಕೌಟುಂಬಿಕವಾಗಿ, ಸಾಮಾಜಿಕವಾಗಿ ಅಭಿವ್ಯಕ್ತಗೊಳ್ಳುತ್ತಿರುವ ಗಂಡು-ಹೆಣ್ಣು ಎನ್ನುವ ಭಿನ್ನತೆಯಿಂದಾಗಿ ಒಂದು ಅಂಶ ಸ್ಪಷ್ಟವಾಗುತ್ತದೆ. ಎಂದರೆ, ಎಲ್ಲಿಯವರೆಗೆ ನಾವು ನಮ್ಮ ಮೂಲಭೂತ ಅಸಮತೋಲನಗಳನ್ನು ಸರಿ ಮಾಡುವುದರ ಕಡೆಗೆ ಗಮನಹರಿಸುವುದಿಲ್ಲವೋ, ಅದರಲ್ಲಿ ಯಶಸ್ವಿಯಾಗುವುದಿಲ್ಲವೋ, ಅಲ್ಲಿಯವರೆಗೆ ಜಾಗತಿಕ ಮಟ್ಟದಲ್ಲಿ ನಡೆಯುವ ಪ್ರತಿಯೊಂದು ವಿದ್ಯಮಾನ ಕೂಡ ನಮ್ಮಲ್ಲಿ ಆಂತರಿಕ ಸಮಸ್ಯೆಗಳನ್ನು ದೊಡ್ಡದಾಗಿ ಬಿಡಿಸುತ್ತಾ, ಹರಡುತ್ತಾ ಹೋಗುವುದು ಖಂಡಿತವಾಗಿದೆ. ಕುಟುಂಬದ ಸ್ವರೂಪವೇ ಆಗಿರಲಿ, ಉದ್ಯೋಗದ ಕ್ಷೇತ್ರವೇ ಇರಲಿ ಇದರಲ್ಲಿ ವ್ಯಕ್ತವಾಗುವ ಲಿಂಗಾಧಾರಿತ ಆಂತರಿಕ ವ್ಯತ್ಯಾಸಗಳು ಆಯಾ ದೇಶಗಳ ಒಂದು ಆಂತರಿಕ ಸಂದಿಗ್ಧತೆಯೇ ಆಗಿದೆ. ಈ ರೀತಿಯ ಆಂತರಿಕ ವ್ಯತ್ಯಾಸಗಳು ಮತ್ತು ಸಮಸ್ಯೆಗಳು ಎಷ್ಟರಮಟ್ಟಿಗೆ ಉಳಿದುಕೊಂಡಿವೆ ಅಥವಾ ಪರಿಹಾರವಾಗಿವೆ ಎನ್ನುವುದರ ಮೇಲೆ ಯಾವ ದೇಶದ ಮಹಿಳೆಯರ ಸ್ಥಿತಿಗತಿ ಯಾವ ಬಗೆಯದ್ದು ಎನ್ನುವುದು ನಿರ್ಧಾರವಾಗುತ್ತದೆ.

### ಜಾಗತೀಕರಣ ಮತ್ತು ತಥಾಕಥಿತ ಸಾಂಸ್ಕೃತಿಕ ದ್ವಂದ್ವ

ಇಂಡಿಯಾದ ವರ್ತಮಾನ ಹಿಂದುತ್ವವಾದ ಪ್ರತಿಪಾದಿಸುವ 'ಸ್ವದೇಶಿ' ಸ್ತ್ರೀ ಪ್ರತಿಮೆ (ತಲೆಯ ಮಧ್ಯಭಾಗದ ತುಂಬ ಸಿಂಧೂರ, ಕೈತುಂಬ ಬಳೆ, ತುಂಬು ಕೈಯ ರವಿಕೆ, ತಲೆಯ ಮೇಲೆ ಸೆರಗು.) ಯನ್ನು ಸಾಂಸ್ಕೃತಿಕ ಅಸ್ತ್ರವಾಗಿ ಬಳಸಿಕೊಳ್ಳುತ್ತಿದೆ. ಜೀನ್ಸ್ ಧರಿಸಿ, ಪೆಪ್ಸಿ ಕುಡಿಯುವ ಪಾಶ್ಚಿಮಾತ್ಯ ಪ್ರತಿಮೆಗಳನ್ನು ವಿರೋಧಿಸುವ ಹಿನ್ನೆಲೆಯಿಂದಲೇ ಮಹಿಳೆಯರ ಈ 'ಸ್ವದೇಶಿ' ಪ್ರತಿಮೆ ಅನಾವರಣಗೊಂಡಿದೆ. 1997ರಲ್ಲಿ ಸೌಂದರ್ಯ ಸ್ಪರ್ಧೆಯ ಬಗ್ಗೆ ಮಹಿಳಾ ಪರ ಸಂಘಟನೆಗಳಲ್ಲಿ ವಿರೋಧಿಸುತ್ತಿದ್ದ ಸಂದರ್ಭದಲ್ಲಿ ಫೆಮಿನಾ ಪತ್ರಿಕೆಯೂ ತರ್ಕಬದ್ಧವಾಗಿ ಮಿಸ್ ಇಂಡಿಯಾ ಸೌಂದರ್ಯ ಸ್ಪರ್ಧೆಯನ್ನು ಸಮರ್ಥಿಸಿಕೊಂಡಿತು. ಮಿಸ್ ಇಂಡಿಯಾ ಸ್ಪರ್ಧೆಯನ್ನು ವಿರೋಧಿಸುವವರು ಭಾರತೀಯ ಸಂಸ್ಕೃತಿಯ ಸಿದ್ಧ ಪ್ರತಿಮೆಗಳನ್ನು ಎದುರಿಗಿಟ್ಟು ಹೋರಾಟಕ್ಕೆ ಹೊರಟವರಾಗಿದ್ದಾರೆ. ಆದರೆ ವಾಸ್ತವದಲ್ಲಿ ಅವರು ಬಿಡುಗಡೆಯನ್ನು ಬಯಸುವ ಭಾರತೀಯ ಮಹಿಳೆಯರ ಸಾರ್ವಜನಿಕ ಬದುಕನ್ನು ಸಹಿಸಿಕೊಳ್ಳದ ಪ್ರತಿಗಾಮಿಗಳೆಂದು ಫೆಮಿನಾ ಪತ್ರಿಕೆ ಹೇಳಿತು. ಫೆಮಿನಾ ಪತ್ರಿಕೆಯು ಮಿಸ್ ಇಂಡಿಯಾ ಸ್ಪರ್ಧೆಯನ್ನು ಸಮರ್ಥಿಸಿಕೊಂಡ ರೀತಿ ಮತ್ತು ಹಿಂದುತ್ವವಾದಿಗಳು ಹೇಳುತ್ತಿರುವ 'ಸಂಸ್ಕೃತಿಯ ದರ್ಪಣ ಬಿಂಬ' (ಸ್ತ್ರೀಯ) ಇವೆರಡರ ನಡುವೆ ಹೆಚ್ಚು ವ್ಯತ್ಯಾಸವಿಲ್ಲ. ಹಿಂದುತ್ವವಾದ ಪ್ರತಿಪಾದಿಸುತ್ತಿರುವ ಭಾರತೀಯ ನಾರಿಯ ಪ್ರತಿಮೆ ಮತ್ತು ಫೆಮಿನಾ ಪತ್ರಿಕೆಯಂಥ ಧೋರಣೆಗಳು ಪ್ರತಿಬಿಂಬಿಸುವ ಆಧುನಿಕ ಪ್ರತಿಮೆಗಳೆರಡೂ ಮಹಿಳೆಯರ ನೆಲೆಯಿಂದ ಸಂಸ್ಕೃತಿಯನ್ನು 'ಸೌಂದರ್ಯ ಸಾಧನ'ಗಳಾಗಿ ಬಿಂಬಿಸುವಂಥವು. ಇಂತಹ ಕಾಸ್ಮೆಟಿಕ್ ಐಡೆಂಟಿಟಿಯ ಮಹಿಳೆಯರನ್ನು ದೇಶಿ, ವಿದೇಶಿಯಾಗಿ (ಸಂಪ್ರದಾಯ, ಆಧುನಿಕತೆ) ಪರಿಗಣಿಸುತ್ತಿದೆ. ಇದರಿಂದಾಗಿ ಮಹಿಳೆಯರು ಗಂಭೀರವಾಗಿ ತುತ್ತಾಗಿರುವ, ಮಾಧ್ಯಮಗಳು ಅವಿರತವಾಗಿ ಹರಡುತ್ತಿರುವ 'ಕೊಳ್ಳುಬಾಕ'ತನದ ಸಾಂಸ್ಕೃತಿಕ ಆಕ್ರಮಣ ಶೀಲತ ಅರಿವಿಗೆ ಬಾರದೆ ಹೋಗುವ, ಬಂದರೂ ಅದನ್ನು ಗಂಭೀರವಾಗಿ ಪರಿಗಣಿಸದಿರುವ ಅಪಾಯ ವ್ಯಕ್ತವಾಗುತ್ತಿದೆ.

ಸಂಸ್ಕೃತಿಯೆಂಬುದು ಮೂಲತಃ ಬಹುರೂಪಿಯಾಗಿರುವಂಥದ್ದು. ನಿರ್ದಿಷ್ಟ ಜನಾಂಗದ ಭಾಷೆ, ಚರಿತ್ರೆ, ಜ್ಞಾನ, ಜೀವನ ದೃಷ್ಟಿ ಇವೆಲ್ಲವು ಒಟ್ಟಾಗಿ ಸಂಸ್ಕೃತಿಯ ರೂಪದಲ್ಲಿ ವ್ಯಾಖ್ಯಾನಕ್ಕೆ ಒಳಗಾಗುತ್ತದೆ. ಕಾಲದ ನಿರಂತರತೆ ಸಂಸ್ಕೃತಿಯನ್ನು ಒಡೆದು, ಕೂಡಿಸಿ, ಬೆರೆಸಿ ಕಟ್ಟುತ್ತದೆ. ಎಂದರೆ, ಸಂಸ್ಕೃತಿಯೆಂಬುದು ಕಾಲವನ್ನು ಮುಕ್ತವಾಗಿ ಸ್ವೀಕರಿಸುತ್ತದೆ ಅಲ್ಲದೆ ಸ್ವಾಗತಿಸುತ್ತದೆ. ಹಾಗಾಗಿಯೇ ಸಂಸ್ಕೃತಿ ಎನ್ನುವುದು ಆಕ್ರಮಣ ಮತ್ತು ಪ್ರತಿರೋಧಗಳಿಂದ ನಿರೂಪಿತಗೊಂಡಿರುವ ಜನತೆಯ ಜೀವನಕ್ರಮ. ಜಾಗತಿಕರಣದ ಪ್ರಕ್ರಿಯೆಯ ಒಳಗೆ ಮಹಿಳೆಯರು ಬೇಕಾಗಿಯೋ, ಬೇಡವಾಗಿಯೋ (ಕೊಳ್ಳುಬಾಕ ನೆಲೆಯಲ್ಲಿ) ಅರಿವಿಲ್ಲದೆ ಸೇರಿಕೊಳ್ಳುತ್ತಿರುವುದರಿಂದ 'ಬಹುತ್ವ'ದ ಕಲ್ಪನೆಯನ್ನೇ ಒರೆಸಿ ಹಾಕುವ ಪರಿಸ್ಥಿತಿ ಬಂದೊದಗಿದೆ. ಗ್ಯಾಸ್‌ಸ್ಟವ್, ಕುಕ್ಕರ್, ಮಿಕ್ಸಿ ರೆಫ್ರಿಜರೇಟರ್, ವಾಷಿಂಗ್ ಮಿಷನ್‌ನಂತಹ ದಿನಬಳಕೆಯ ವಸ್ತುಗಳಿಂದ ಹಿಡಿದು ಬದುಕಿನ ಬಹುಮುಖಿ ಗ್ರಹಿಕೆಯ ಕಲ್ಪನೆಯೇ ಮಾಯವಾಗುತ್ತಿದೆ. ಸುಲಭ ಸಾಧ್ಯ, ಹಣ-ಶ್ರಮ ಉಳಿತಾಯ ಎನ್ನುವ ಮಾರುಕಟ್ಟೆಯ ಜಾಹೀರಾತು ಯಾವುದನ್ನೇ ಆದರೂ ನಗದೀಕರಣಗೊಳಿಸುತ್ತದೆ. ಉದಾ : ರಾಜಸ್ಥಾನದ 'ಪಾಲೊಡಿ' ಎಂಬ ಹಳ್ಳಿಯನ್ನು ಸಹಕಾರ ಪ್ರವಾಸಿ ತಾಣವಾಗಿ ಪರಿವರ್ತಿಸಿತು. ಆ ಹಳ್ಳಿಯ ನೀಳಕಾಯದ ಹೆಣ್ಣುಮಕ್ಕಳು ಗ್ರಾಮೀಣ ಉಡುಗೆಯಲ್ಲಿ ತಲೆಯ ಮೇಲೆ ಗಡಿಗೆಗಳನ್ನು ಪೇರಿಸಿ ಕೊತ್ತು ಪ್ರವಾಸಿಗರ ಕ್ಯಾಮರಾಕ್ಕೆ ಪೋಸ್

ಕೊಟ್ಟು ಸುಲಭವಾಗಿ ಹಣ ಸಂಪಾದಿಸುವುದನ್ನು ಕಲಿತು ಬಿಟ್ಟರು. ಇದು ಮುಂಚಿತವಾಗಿ ಊಹಿಸಲಾರದಂತಹ ದೊಡ್ಡ ಬದಲಾವಣೆ ಏನಲ್ಲ. ಬಡತನ ಎನ್ನುವುದು ಎಲ್ಲವನ್ನೂ ಮಾರಿದರೆ, ಹಣ ಯಾವುದನ್ನೇ ಆದರೂ ಖರೀದಿರುತ್ತದೆ. ಹೊಸ ಅಂತರಾಷ್ಟ್ರೀಯ ಮಾರುಕಟ್ಟೆಯಲ್ಲಿ ಸಾಮಾನ್ಯ ಜನರ ಜೀವನ ಕ್ರಮಗಳು ಕೂಡ ಸರಕು ಸರಂಜಾಮಾಗಿ ಮಾರಾಟಗೊಳ್ಳುತ್ತವೆ.

ಜಾಗತೀಕರಣದ ಜೊತೆ ಜೊತೆಗೆ ಕಾಣಿಸಿಕೊಂಡ ಕೋಮುಗಲಭೆ ದೇಶದ ಉದ್ದಗಲಕ್ಕೂ ಹರಡಿಬಿಟ್ಟಿದೆ. ಗುಜರಾತಿನಲ್ಲಿ 1969ರಲ್ಲಿ ಉದ್ಭವಿಸಿ ಕೋಮುಗಲಭೆ ಬಿತ್ತಿದ ವಿಷಬೀಜ 2003ರವರೆಗೂ ಕ್ಷುದ್ರ ಫಲಗಳನ್ನು ನೀಡುತ್ತಿದೆ. ದೇಶದ ಎಲ್ಲ ಕಡೆಗೂ ಪಸರಿಸಿರುವ ಇಂತಹ ಕೋಮುಗಲಭೆಗಳಲ್ಲಿ ಮೊದಲು ಪುರುಷರು ಮಾತ್ರ ಭಾಗಿಗಳೂ ಬಲಿಗಳೂ ಆಗಿರುತ್ತಿದ್ದರು. ಆದರೆ ಗುಜರಾತ್ ಹಿಂಸಾ ಕಾಂಡದ ನಂತರದಲ್ಲಿ ಮಹಿಳೆಯರನ್ನು ಹಾಗೂ ಮಕ್ಕಳನ್ನು ಪೂರ್ವೋದ್ದೇಶಿತ ಗುರಿಗಳಾಗಿ, ಬಲಿಗಳಾಗಿ ಬಳಸಿಕೊಳ್ಳಲಾಗುತ್ತಿದೆ. ಗುಜರಾತ್ ಹಿಂಸಾಕಾಂಡದಿಂದ ತೊಡಗಿ ಮುಂದಿನ ಕೋಮುಗಲಭೆಗಳು ಹೆಚ್ಚುಹೆಚ್ಚು ಬರ್ಬರವಾಗತೊಡಗಿರುವುದು ಮಹಿಳೆಯರ ಮಕ್ಕಳ ದೃಷ್ಟಿಯಿಂದ ಭವಿಷ್ಯವನ್ನು ಕಸಿಯುತ್ತಿರುವ ಅಂಶವಾಗಿ ವ್ಯಕ್ತವಾಗುತ್ತದೆ.

ಜಾಗತೀಕರಣ ಮತ್ತು 'ಮಹಿಳೆಯರ ಅಸ್ತಿತ್ವದ ಪ್ರಶ್ನೆ' ಎನ್ನುವ ಈ ಲೇಖನದ ಕೊನೆಯನ್ನು ಅಲ್ಬರ್ಟ್‌ಕಾಮುವಿನ ಕಾದಂಬರಿ 'ದಿ ಪ್ಲೇಗ್' ಅನ್ನುವ ಉದಾಹರಿಸುವುದರ ಮೂಲಕವಾಗಿ ಮುಕ್ತಾಯಗೊಳಿಸಬೇಕೆಂದು ಬಯಸಿದ್ದೇನೆ. 'ದಿ ಪ್ಲೇಗ್' ಕಾದಂಬರಿಯು ಮಹಾರೋಗಕ್ಕೆ ತುತ್ತಾದ ಓರನ್ ಪಟ್ಟಣದ ಬಿರುಕು ಬಿಟ್ಟ ಜೀವನವನ್ನು ಚಿತ್ರಿಸುತ್ತದೆ. ಇಂತಹ ಸಂದರ್ಭವನ್ನು ಬಳಸಿಕೊಂಡು ನೌಕರಶಾಹಿ ಹಣ ಮಾಡುತ್ತದೆ. ಧಾರ್ಮಿಕರ ಪ್ರಚಾರಕರು ದೇವರು ಮನುಷ್ಯನ ಮೇಲೆ ಕೋಪಗೊಂಡಿದ್ದಾನೆ ಎನ್ನುವ ಕಲ್ಪನೆಯನ್ನು ಪಟ್ಟಣದ ತಂಬಾ ಹರಡುತ್ತಾರೆ. ಮಕ್ಕಳು, ಮುದುಕರು, ಮಹಿಳೆಯರು ಅಪಾಯರಹಿತ ಸ್ಥಳಕ್ಕೆ ಗುಳೆ ಹೋಗುವಾಗ ಹಾದಿ ಮಧ್ಯದ ಗಂಡಾಂತರಗಳಿಗೆ ಸಿಕ್ಕಿಕೊಳ್ಳುತ್ತಾರೆ. ಕಾದಂಬರಿಯ ಮುಖ್ಯ ಪಾತ್ರ ಡಾ|| ಮೀರ್‌ಸ್ಪಾಲ್ ಮಾತ್ರ ಓರನ್ ಪಟ್ಟಣವನ್ನು ಬಿಡದೆ ಉಳಿಯುವ ದೃಢ ನಿರ್ಧಾರ ಮಾಡುತ್ತಾನೆ. 'ನನಗೆ ಸಾಧ್ಯವಾದದ್ದನ್ನು ಮಾಡಲು ನಾನಿರುವ ಸ್ಥಳಗಳನ್ನೇ ಆಯ್ಕೆ ಮಾಡಿಕೊಳ್ಳುತ್ತೇನೆ' ಇದು ಅವನ ದೃಢ ಸಂಕಲ್ಪವಾಗುತ್ತದೆ. ಕಾಲ ಸರಿದಂತೆ ಪ್ಲೇಗ್ ಮಹಾಮಾರಿ ಮರೆಯಾಗುತ್ತದೆ. ಇದಕ್ಕೆ ಮೀರ್‌ಸ್ಪಾಲ್‌ನ ಹೋರಾಟ ಕಾರಣವಾಗುವುದಿಲ್ಲ. ಬದಲಾಗಿ ಅದು ಹೇಗೆ ಬಂತೋ ಹಾಗೆಯೆ ಮಾಯವಾಗುತ್ತದೆ. ಕಾಮುವಿನ ದೃಷ್ಟಿಯಲ್ಲಿ ರೋಗದ ಪ್ರಾರಂಭ ಮತ್ತು ಅಂತ್ಯ ಎರಡೂ ಅಸಂಗತ. ಕಾಮೂ ಬುದ್ಧಿಪೂರ್ವಕ ಆಯ್ಕೆಗೆ ಮಾತ್ರ ಮಹತ್ವ ನೀಡುತ್ತಾನೆ. ಆಯ್ಕೆಗಳ ಜವಾಬ್ದಾರಿಯನ್ನು ವ್ಯಕ್ತಿಗಳು ಹೊರಬೇಕು. ಅಸ್ತಿತ್ವವಾದದ ಪ್ರಕಾರ ಜೀವನವೆಂದರೆ ಆಯ್ಕೆಗಳ ಸರಮಾಲೆ.

ಜಾಗತೀಕರಣ ವರ್ತಮಾನದ ಸಂದರ್ಭದಲ್ಲಿ ಮಹಿಳೆಯರಿಗೆ ಆಯ್ಕೆಗಳೇ ಇಲ್ಲವಾಗಿವೆ. ಈ ಸಂಗಿದ್ಧತೆ ಹೇಗಿದೆ ಎಂದರೆ, ಮಹಿಳೆಯರು ಪ್ರತಿಕ್ಷಣದಲ್ಲಿ ಕಾರ್ಯೋನ್ಮುಖರಾಗದೆ ಇದ್ದರೆ ಶೋಷಣೆ, ಹಿಂಸೆಯ ಫಲ ಅನುಭವಿಸಬೇಕಾಗುತ್ತದೆ. ಜಾಗತೀಕರಣದಿಂದ ಎಲ್ಲಾ ನೆಲೆಗಳಿಂದಲೂ ಮಾರುಕಟ್ಟೆಯ ಬಿಗಿತದೊಳಗೆ ಸಿಕ್ಕಿಕೊಂಡಿರುವ ಮಹಿಳೆಯರು ಭವಿಷ್ಯವನ್ನು ಮರಳಿ ಸಂಪಾದಿಸಬೇಕಾದುತ್ತದೆ. ಸ್ವಾತಂತ್ರ್ಯದ, ಸ್ವಯಂ ನಿರ್ಣಯದ ಹಾಗೆಯೆ ಸ್ವಗೌರವದ ಶಕ್ತಿಯನ್ನು ಮಹಿಳೆಯರು ಸಂಪಾದಿಸಿಕೊಂಡರೆ ಮಾತ್ರ ಭವಿಷ್ಯದ ಅಸ್ತಿತ್ವ ಸಾಕಾರಗೊಂಡಿತು. ಪ್ರತಿದಿನ ಹೊಸದಾಗಿ ಕಲ್ಪಿಸಿಕೊಂಡು, ಕಥಿಸಿಕೊಂಡು ನಡೆದರೆ ಮಾತ್ರ ಅದು ಪರರ ವಶವಾಗದೆ ಸ್ವಂತದ, ಸ್ವಂತಿಕೆಯ ಸೀಮೆಯಾಗಿ ರೂಪುಗೊಳ್ಳಬಹುದು. ಮಹಿಳೆಯರ ಭವಿಷ್ಯದ ಈ ಕಲ್ಪನಾ ಕಥನ ಸಂಕಥನವಾಗಿಯೂ ಪರಿಕಲ್ಪನಾ ಕಥನವಾಗಿಯೂ ರೂಪಿತಗೊಂಡರೆ ಮಾತ್ರ ಸಮಾಜದೊಳಗೆ ಮಹಿಳೆಯರ ಅಸ್ತಿತ್ವವೆನ್ನುವುದು ಅರ್ಥಪೂರ್ಣವಾಗಿ ಉಳಿದುಕೊಳ್ಳಬಹುದು.

### ಪರಾಮರ್ಶನ ಗ್ರಂಥಗಳು

1. ಅಶ್ವಿನಿ ಮಹಾಜನ್ (ಮೂಲ) : (1998) ಜಾಗತೀಕರಣ ಮತ್ತು ಉದ್ಯೋಗ ಸ್ವದೇಶಿ ಜಾಗರಣ ಮಂಚ್, ಕರ್ನಾಟಕ.
2. Boserup. E. (1987) Inequality between the sex's lahn catwell and etallbid.
3. Odeyara D. Heggade (1999) groblisation Liberalisation and Privatisation : Gajanana Publications Mysore.
4. Spivok Gayatri Chakravorty (1994) Culture/ Sex/Economics Conference : La Irobe University, Melbourne.
5. Susan Moller Okin (1997) is Multiculturlism Bad for Women ? Princeton University Press, New Jersey.

ಕೃಪೆ: ಮಹಿಳಾ ಅಧ್ಯಯನ

# ಹೆಂಗಸರ ಮುಟ್ಟು ಗಂಡಸರಿಗೆ ಸಮಸ್ಯೆ

– ನೇಮಿಚಂದ್ರ

ಕಳೆದ ತಿಂಗಳು ಕೆಲಸದ ಮೇಲೆ ಫ್ರಾನ್ಸ್‌ನಲ್ಲಿ ಎರಡು ವಾರ ಕಳೆದಿದ್ದೆ. ಮೂರು ಕಂಪನಿಗಳಿಗೆ ಭೇಟಿ ಕೊಟ್ಟರೂ, ನನಗೆ ಒಬ್ಬರೂ ಮಹಿಳಾ ಇಂಜಿನಿಯರುಗಳು ಕಾಣಲಿಲ್ಲ. ಮಹಿಳಾ ಇಂಜಿನಿಯರುಗಳು ಇಲ್ಲಿ ಇದ್ದರೂ, ಅವರು ಅಲ್ಪ ಸಂಖ್ಯಾತರು. ಯೂರೋಪು, ಅಮೆರಿಕ, ಇಸ್ರೇಲನಂತಹ ಮುಂದುವರೆದ ದೇಶಗಳಿಂದ ಆಗಮಿಸಿದ ತಂತ್ರಜ್ಞರು ಬಲು ಬಾರಿ, ಮೀಟಿಂಗ್‌ನಲ್ಲಿ ಸಾಲಾಗಿ ನಾವು ಮೂರು-ನಾಲ್ಕು ಜನ ಮಹಿಳಾ ಅಧಿಕಾರಿಗಳು, ಇಂಜಿನಿಯರುಗಳು ಕುಳಿತಿರುವುದನ್ನು ನೋಡಿ ಅಚ್ಚರಿ ವ್ಯಕ್ತ ಪಡಿಸಿರುವುದುಂಟು. ಭಾರತದಲ್ಲಿ ಕಂಡಷ್ಟು ಮಹಿಳಾ ಇಂಜಿನಿಯರುಗಳು, ಪ್ರೊಫೆಸರುಗಳು, ವೈದ್ಯರು, ನಿಮಗೆ ಯೂರೋಪು, ಅಮೆರಿಕಗಳಲ್ಲೂ ಕಾಣಸಿಗರು.

ಎರಡು ವರ್ಷದ ಹಿಂದೆ ಇಸ್ರೇಲಿನ ಪ್ರತಿಷ್ಠಿತ ಸರ್ಕಾರಿ ಕಾರ್ಖಾನೆಯೊಂದಕ್ಕೆ ಭೇಟಿ ಕೊಟ್ಟಾಗ, ಅಲ್ಲಿ ಮಹಿಳೆಯರ ಸಂಬಳ ಪುರುಷರಿಗಿಂತ ಕಡಿಮೆ ಎಂಬ ಅಂಶ ತಿಳಿದು ಬಂದಿತ್ತು. ಮೊನ್ನೆ ಫ್ರಾನ್ಸ್‌ನಲ್ಲಿ ಆಕಸ್ಮಿಕವಾಗಿ ಅವರಿಂದ ಒಂದು ಮಾಹಿತಿ ಹೊರಬಿದ್ದಿತು. 'ಅಲ್ಲಿ ಮಹಿಳೆಯರು 55 ವರ್ಷಕ್ಕೆ ನಿವೃತ್ತರಾಗಿ ಬಿಡಬೇಕು. ಪುರುಷರು 60ರ ತನಕ ಮುಂದುವರೆಯಬಲ್ಲರು. ನಿಜಕ್ಕೂ ಹೌಹಾರಿದೆ. ಬಲು ಮುಂದುವರೆದಿರುವ ಈ ದೇಶಗಳಲ್ಲಿ ಕಾನೂನು ಪ್ರಕಾರವೂ ಮಹಿಳೆಯರಿಗಿನ್ನೂ ಸಮಾನತೆಯ ರಕ್ಷಣೆ ದೊರೆತಿಲ್ಲ 'ಮುಂದುವರೆದ ದೇಶಗಳಲ್ಲಿ ಇಷ್ಟೊಂದು ತಾರತಮ್ಯವೆ ? ನಮ್ಮ ಭಾರತದಲ್ಲಿ ಹೆಣ್ಣು-ಗಂಡು ಎಂಬ ವ್ಯತ್ಯಾಸವಿಲ್ಲದೆ ಕಂಪನಿಯ ನಿಯಮಗಳು ಇಬ್ಬರಿಗೂ ಒಂದೇ ಬಗೆಯಲ್ಲಿ ಅನ್ವಯವಾಗುತ್ತವೆ' ಎಂದು ಬಲು ಹೆಮ್ಮೆಯಿಂದ ಸಾರಿದೆ. ಹಿಂತಿರುಗಿ ಬಂದಾಗ ಉತ್ತರ ಪ್ರದೇಶದ ಸಾರಿಗೆ ಸಂಸ್ಥೆಯ ಛೇರ್‌ಮನ್ ಧರ್ಮೇಂದ್ರ ದೇವ್ ಎಂಬಾತ, '45ರ ನಂತರದ ಮಹಿಳೆಯರು ಅನುತ್ಪಾದಕರು, ಅವರ ಕೆಲಸವನ್ನು ಎಳೆ ವಯಸ್ಸಿನ ಗಂಡಸರಿಗೆ ಕೊಡಬೇಕು' ಎಂದು ಸಾರಿರುವುದನ್ನು ಓದಿ ನನ್ನ ಹೆಮ್ಮೆಯೆಲ್ಲ ಕರಗಿ ನೀರಾಯಿತು.

ಅಸಮರ್ಥನೆ, ಅನುತ್ಪಾದಕತೆ, ಕುಡಿದು ಕೆಲಸಕ್ಕೆ ಬರುವುದು, ಕೆಲಸ ಬಿಟ್ಟು ಶೇರು ಮಾರ್ಕೆಟ್ಟಿನ ಬೆನ್ನು ಹತ್ತುವುದು, ಕೆಲಸದ ವೇಳೆಯಲ್ಲಿ ನಿದ್ದೆ ಹೊಡೆಯುವುದು, ಎಲ್.ಐ.ಸಿ., ಎನ್.ಎಸ್.ಸಿ. ಮಾರುವುದು - ಇದಕ್ಕೆ ಉದಾಹರಣೆಯಾಗಿ ಎಷ್ಟು ಮಂದಿ ಗಂಡಸರನ್ನು ಬೇಕಾದರೂ ಎಣಿಸಿ ಹಾಕಬಹುದು. ಅನುತ್ಪಾದಕ ಗಂಡಸರ ಕೆಲಸವನ್ನೆಲ್ಲ ಉತ್ಪಾದಕ ಹೆಂಗಸರಿಗೆ ಕೊಡುವಂತಿದ್ದರೆ, ಬಹಳಷ್ಟು ಮಂದಿ ಗಂಡಸರು ಕೆಲಸ ಕಳೆದುಕೊಂಡು ಮನೆಗೆ ಹೋಗುತ್ತಿದ್ದರು.

ಹೆಂಗಸರಲ್ಲಿ 45, ದೈಹಿಕವಾಗಿ ಮುಟ್ಟು ನಿಲ್ಲುವ ವಯಸ್ಸು. ದೈಹಿಕ 'ಉತ್ಪಾದಕ' ಶಕ್ತಿಗೂ ಕಾರ್ಯಕ್ಷಮತೆಗೂ ಸಂಬಂಧವಿಲ್ಲ ಎಂದು ಬಹಳ ಮಂದಿ ಗಂಡಸರಿಗೆ ಅರ್ಥವೇ ಆಗುವುದಿಲ್ಲ. ಅನೇಕ ಮಹಿಳೆಯರು ಮುಟ್ಟು ನಿಂತ ಮೇಲೆ ಮತ್ತಷ್ಟು ನಿರಾಳವಾಗಿ ಕೆಲಸದಲ್ಲಿ ಮುಂದುವರೆಯುತ್ತಾರೆ, ವೃತ್ತಿಯ ಶಿಖರವೇರಿದ್ದಾರೆ. ಇತ್ತೀಚೆಗಷ್ಟೆ ಮುಂಬಯಿಯ ಕ್ರೈಂ ವಿಭಾಗದ ಮುಖ್ಯಸ್ಥರಾಗಿ ಬಂದ ಮಹಿಳೆ, 46 ವರ್ಷ ವಯಸ್ಸಿನ ಮೀರಾ ಬೋರ್ಗಾಂವ್ಕರ್. ಹೊಸ ಚರಿತ್ರೆ ನಿರ್ಮಿಸಿದ 'ಅನುತ್ಪಾದಕ' ವಯಸ್ಸಿನ ಈ ಮಹಿಳೆ, ಮುಂಬಯಿಯ ಒಂದು ಶತಮಾನಕ್ಕೂ ಹೆಚ್ಚು ಹಳೆಯದಾದ ಪೋಲಿಸ್ ಕಮಿಶನರೇಟಿನ ಪ್ರತಿಷ್ಠಿತ ಕ್ರೈಮ್ ವಿಭಾಗಕ್ಕೆ ಮುಖಂಡಳಾಗಿ ಬಂದ ಮೊತ್ತ ಮೊದಲ ಮಹಿಳಾ ಐ.ಪಿ.ಎಸ್. ಅಧಿಕಾರಿ. ಈಕೆ ರಾಷ್ಟ್ರಪತಿಗಳ ಚಿನ್ನದ ಪದಕ ಪಡೆದಿದ್ದಾರೆ. ಧರ್ಮೇಂದ್ರರ ಪ್ರಕಾರ ಈಕೆ ನಿವೃತ್ತಳಾಗಿ ಒಂದು ವರ್ಷದ ಹಿಂದೆಯೇ ಮನೆಗೆ ಹೋಗಬೇಕಿತ್ತೇನೋ.

ಸುದ್ದಿಯ ಹಿನ್ನೆಲೆ ಹೀಗಿದೆ. ಉತ್ತರ ಪ್ರದೇಶದ ಸಾರಿಗೆ ಸಂಸ್ಥೆಯ ಛೇರ್‌ಮನ್ ಧರ್ಮೇಂದ್ರ ದೇವ್ ಆಗಸ್ಟ್ ತಿಂಗಳ ಕೊನೆಯಲ್ಲಿ ತಮ್ಮ 60ನೇ ವಯಸ್ಸಿನಲ್ಲಿ ನಿವೃತ್ತರಾಗುತ್ತಿದ್ದಾರೆ. ಈತ ತನ್ನ ವಿಭಾಗದ 'ದೊಡ್ಡ ಸಮಸ್ಯೆ'ಯನ್ನು ಪರಿಹರಿಸಿ ನಿವೃತ್ತರಾಗಲು ಬಯಸುತ್ತಿದ್ದಾರಂತೆ. ಸುಮಾರು 400 ಜನ ಮಹಿಳೆಯರು, ಕಳೆದ ಅನೇಕ ವರ್ಷಗಳಲ್ಲಿ ತಮ್ಮ ಗಂಡ ಅಥವಾ ತಂದೆಯ ಅಕಾಲ ಸಾವಿನ ಕಾರಣದಿಂದ ಕೆಲಸಕ್ಕೆ ಸೇರಿದ್ದಾರೆ. ಇವರೆಲ್ಲರನ್ನೂ 45ನೇ ವಯಸ್ಸಿಗೆ ಮನೆಗೆ ಕಳುಹಿಸಬೇಕು ಎಂಬುದು ಈತನ ಉದ್ದೇಶ. ಕಾರಣ ಈ ಎಲ್ಲಾ ಮಹಿಳೆಯರು 45ರ ವಯಸ್ಸಿನ ಆಸುಪಾಸಿನಲ್ಲಿದ್ದಾರೆ. 'ಹೆಂಗಸರು ಈ ವಯಸ್ಸಿನಲ್ಲಿ ಚಟುವಟಿಕೆಯಿಂದಿರಲು ಸಾಧ್ಯವಿಲ್ಲ, ಅವರು ಈಗ ಉತ್ಪಾದನಾ ಹೀನರು' ಎಂಬುದು ಈತನ ತೀರ್ಪು. ಈ ಬಡ ಮಹಿಳೆಯರು ಮಾಡುತ್ತಿರುವ ಕೆಲಸವೇನು, ಸೀಟಿನ ಕವರ್ ಹೊಲೆಯುವುದು, ಮತ್ತು ಚಪರಾಸಿಯ ಕೆಲಸ. ತಮ್ಮ ಕುಟುಂಬದ ಯಾರಾದರೂ ಚಿಕ್ಕ ವಯಸ್ಸಿನ ಗಂಡು ಹುಡುಗರಿಗೆ ತಮ್ಮ ಕೆಲಸ ಕೊಟ್ಟು ಹೋಗಲು ಈ ಮಹಾಶಯನ ಸಲಹೆ. ಅಲ್ಲಿಗೆ ಮತ್ತೆ ಈ ಹೆಂಗಸರು ಗಂಡಿನ ಆಸರೆಗೆ ಬೀಳಬೇಕು.

ಆನ್ ಲೈನ್ ಲಾಟರಿ ಯುಗದಲ್ಲಿ, ಹತ್ತು ರೂಪಾಯಿಗೆ ಡಬ್ಬಿ ಅಂಗಡಿಯಲ್ಲೂ ಹೆಂಡ ಸಿಗುವ ಸಮಯದಲ್ಲಿ, ಕುಡಿವ, ಜೂಜಾಡುವ ಮನೆ ಗಂಡಸರ ಹೊರೆಯನ್ನು ಹೊತ್ತು ಹೆಣ್ಣು ಹೊಲಗಳಲ್ಲಿ, ಕಛೇರಿಗಳಲ್ಲಿ ಅದಾಗಲೆ ದುಡಿಯುತ್ತಿದ್ದಾಳೆ. ಉತ್ಪಾದನಾ ಹೀನ ಗಂಡಸರ ಕೆಲಸವನ್ನೆಲ್ಲ ಹೆಂಗಸರಿಗೆ ಕೊಡುವಂತಿದ್ದರೆ, ಅರ್ಧ ಸರಕಾರಿ ಕಛೇರಿಗಳು, ಕಾರ್ಖಾನೆಗಳು ಉದ್ಧಾರವಾಗುತ್ತಿದ್ದುದಲ್ಲದೆ, ನಮ್ಮ ಹಳ್ಳಿಗಳೂ ಉದ್ಧಾರವಾಗುತ್ತಿದ್ದವೇನೋ.

ಗಂಡಸರಿಗೆ ಹೆಣ್ಣಿನ ಮುಟ್ಟಿನಂತೆಯೇ, ಮುಟ್ಟು ನಿಲ್ಲುವ

ಪ್ರಕ್ರಿಯೆಯೂ ಭಯಂಕರವಾಗಿ ಕಾಣುತ್ತದೆ. ದೈಹಿಕವಾಗಿ ಹೆರುವ ಶಕ್ತಿ ನಿಂತು ಹೋದೊಡನೆ, ಅವರು 'ಉತ್ಪಾದನಾ ಹೀನ'ರು ಎಂದು ಅರ್ಥೈಸುವ ಇವರ ಬುದ್ಧಿಮತ್ತೆಗೆ ಏನು ಹೇಳೋಣ ? ಹಾಗೆಂದು ಹೆಣ್ಣಿನ ಮುಟ್ಟು ಇರುವ ವಯಸ್ಸಿನಲ್ಲಿ ಅವರು 'ಉತ್ಪಾದಕರು' ಎಂದು ಭಾವಿಸುತ್ತಾರೆ ಎಂದಲ್ಲ. ಹೆಂಗಸರು ತಮ್ಮ ಮುಟ್ಟನ್ನು ಹೇಗೋ ನಿಭಾಯಿಸುತ್ತಾರೆ. ಆದರೆ ಗಂಡಸರಿಗೆ ಅದು ದೊಡ್ಡ ಸಮಸ್ಯೆಯಾದಂತಿದೆ. 'ಲೇಡಿ ಬಾಸ್' ಏನಾದರೂ ರೇಗಿದರೆ 'ಅಯ್ಯೋ ಎಲ್ಲೋ ಆ ದಿನ ಇರಬೇಕು ಕಣೋ' ಎನ್ನುವವರಿದ್ದಾರೆ. ಸದಾ ರೇಗುವ, ಅರಚಾಡುವ ಎಷ್ಟೋ ಗಂಡಸರನ್ನು ನೋಡುವಾಗ ಹೆಂಗಸರಿಗೆ ಮೂರು ದಿನ ಕಾಡುವ ಮುಟ್ಟು, ಇವರಿಗೆ ಶಾಶ್ವತವಾಗಿ ಕಾಡುತ್ತಿದೆ' ಎಂಬ ಅನುಮಾನ ಬರುತ್ತದೆ.

ಮುಂಬಯಿಯಲ್ಲಿ ಓರ್ವ ಪ್ರಸಿದ್ಧ ಸಿನಿಮಾ ತಯಾರಕ ನಿದ್ದಾನೆ, ಆತ ಬಲು ಹೆಮ್ಮೆಯಿಂದ ತನ್ನ ಕಛೇರಿಯಲ್ಲಿ ದುಡಿಯುವ ಎಲ್ಲಾ ಮಹಿಳೆಯರ ಮುಟ್ಟಿನ ದಿನಗಳ ಚಾರ್ಟ್ ಇಟ್ಟುಕೊಂಡಿದ್ದಾನೆ. ಕಾರಣ ಬಲು ಪ್ರತಿಷ್ಠಿತ ಜಾಹಿರಾತುಗಳನ್ನು ಈತನ ಕಂಪನಿ ತಯಾರಿಸುವುದರಿಂದ, ತನ್ನ ಹುಡುಗಿಯರು ಅತ್ಯುತ್ತಮ ಅಭಿನಯ ನೀಡಲು ಸಮರ್ಥರಾಗಿರುವ ದಿನಗಳನ್ನು ಎಣಿಸುತ್ತಾನೆ. ಯಾರು ಮುಟ್ಟಿನ ಕಾರಣ ಹೆಚ್ಚು 'ಸಮರ್ಥ' ರಾಗಿರುವುದಿಲ್ಲವೋ, ಅವರಿಗೆ ಆ ಸಮಯದಲ್ಲಿ ಒಳ್ಳೆಯ ಅಸೈನ್‌ಮೆಂಟ್ ಕೊಡುವುದಿಲ್ಲ. ಮುಟ್ಟಾದ ಹೆಂಗಸರಿಗೆ ಕಡಿಮೆ ಕೆಲಸ ಕೊಟ್ಟು, ಉಳಿದವರಿಗೆ ಹೆಚ್ಚು ಕೆಲಸ ಹಂಚುತ್ತಾನಂತೆ ! ಮುಟ್ಟಿನ ಬಗ್ಗೆಯ ಇಂತಹ ಹುಚ್ಚಿನ ಮಟ್ಟದ ಪೂರ್ವಾಗ್ರಹವೇ ಅನೇಕ ಮಹಿಳೆಯರಿಗೆ ತಲೆನೋವಾಗಿದೆ. ಒಂದು ಕ್ಷಣ ಯೋಚಿಸಿ, ಈ ಮಹಿಳೆಯರಿಗೆ ಮುಟ್ಟಿನ ದಿನಗಳ 'ಒತ್ತಡ' ವಲ್ಲದೆ, ಒಳ್ಳೆಯ ಅಸೈನ್‌ಮೆಂಟ್ ಬಂದಾಗ ತಾನೆಲ್ಲಿ ಮುಟ್ಟಾಗಿ ಬಿಡುತ್ತೇನೋ, ಉತ್ತಮ ಕೆಲಸ ಕೈತಪ್ಪುವುದೋ ಎಂಬ ಮಾನಸಿಕ ಒತ್ತಡವೂ ಕಾಡುತ್ತದೆ. ಇದಲ್ಲದೆ ತಮ್ಮ ಮುಟ್ಟಿನ ದಿನದಂತಹ ಅತ್ಯಂತ ಖಾಸಗಿ ವಿಷಯವನ್ನು, ತಮ್ಮ ಬಾಸ್ ಚಾರ್ಟ್ ಮಾಡಿ 'ಜಾಹಿರಾತು' ಮಾಡುವುದು, ಅವರ ವೈಯಕ್ತಿಕ ಬದುಕಿಗೇ ಲಗ್ಗೆ ಇಟ್ಟಂತೆ.

ಹಿಂದೆಲ್ಲ ಹೆಣ್ಣಿನ ಮುಟ್ಟು ಆಕೆಯನ್ನು ಅನೇಕ ರಂಗಗಳಿಂದ ದೂರವಿಡಲು ಬಳಸಿದ ಸಿದ್ಧ ಅಸ್ತ್ರವಾಗಿತ್ತು. ಇಂದು ಮುಟ್ಟು ನಿಲ್ಲುವ ಪ್ರಕ್ರಿಯೆ ಆಕೆಯನ್ನು ದುಡಿವ ರಂಗದಿಂದ ಹೊರ ಹಾಕುವ ಶಸ್ತ್ರವಾಗಿದೆ.

150 ವರ್ಷಗಳ ಹಿಂದೆ, ಹಾರ್ವರ್ಡ್ ಮೆಡಿಕಲ್ ಕಾಲೇಜು ಹ್ಯಾರಿಯಟ್ ಹಂಟಗೆ ಪ್ರವೇಶ ಕೊಟ್ಟಾಗ ವಿದ್ಯಾರ್ಥಿಗಳು ದಂಗೆಯೆದ್ದು ಆಕೆಯನ್ನು ಹೊರಹಾಕುವಂತೆ ಮಾಡಿದ್ದರು. ತಮ್ಮ ವೈದ್ಯ ವೃತ್ತಿಗೆ ಸ್ಪರ್ಧೆಯ ಸಂಭವ ಕಂಡಾಗಲೆಲ್ಲ ಪುರುಷ ವೈದ್ಯರಿಂದ ವಾದ ವಿವಾದಗಳ ಮಹಾಪೂರವೇ ಹೊರಬಿದ್ದಿತ್ತು. 'ಹೆಣ್ಣು ವೈದ್ಯಳು ಹೇಗಾದಳು ? ಮುಟ್ಟಿನ ದಿನಗಳಲ್ಲಿ ಶಸ್ತ್ರಕ್ರಿಯೆ ಮಾಡಲು ಸಾಧ್ಯವೆ ?' ಎಂದು ಪ್ರಶ್ನಿಸಿದರು. ಇಂದು ಮಹಿಳೆಯರು ವೈದ್ಯರಂಗದಲ್ಲಿ ಮಹಾಪೂರವಾಗಿ ತುಂಬಿರುವಾಗ, ಇಂತಹ ಪ್ರಶ್ನೆ ಇತ್ತೆಂಬುದೂ ಹಾಸ್ಯಾಸ್ಪದವಾಗಿ ಕಾಣುತ್ತದೆ.

ವಿಮಾನ ಚಾಲಕಿಯಾಗಿ ತರಬೇತಿಗೊಂಡ ಮೊಟ್ಟಮೊದಲ ಬ್ರಿಟನ್ನಿನ ಮಹಿಳೆ ಹಿಲ್ಡಾ ಹ್ಯೂಲೆಟ್, ನೌಕಾಸೇನೆಗೆ ಸೇರಿದ್ದ ಆಕೆಯ ಮಗ ಅಮ್ಮನಿಂದ ವಿಮಾನ ಹಾರಾಟವನ್ನು ಕಲಿತಿದ್ದ ! ಆದರೆ 'ಇಂಟರ್‌ನ್ಯಾಷನಲ್ ಕಮಿಷನ್ ಫಾರ್ ಏರ್ ನ್ಯಾವಿಗೇಷನ್' ಮಹಿಳೆಯರನ್ನು ವಾಣಿಜ್ಯ ಹಾರಾಟದಲ್ಲಿ ಪ್ರವೇಶಿಸದಂತೆ ನಿಷೇಧಿಸಿತು. 1926ರಲ್ಲಿ ಸೋಫಿಯಾ ಹೀತ್ ಈ ನಿಷೇಧದ ವಿರುದ್ಧ ಹೋರಾಡಿ, ಹಾರಾಟದ ಲೈಸೆನ್ಸ್‌ಗೆ ಅವಶ್ಯವಿದ್ದ ವೈದ್ಯಕೀಯ ಪರೀಕ್ಷೆ ಮತ್ತು ಸಾಮರ್ಥ್ಯ ಪರೀಕ್ಷೆ ಗಳನ್ನು ತನ್ನ ಮುಟ್ಟಿನ ದಿನಗಳಲ್ಲಿ ತೆಗೆದುಕೊಂಡು ಉತ್ತೀರ್ಣ ಳಾದಳು. ಹೆಂಗಸರು ತಮ್ಮ ಮುಟ್ಟನ್ನು ಹೇಗಾದರೂ ಸಂಭಾಳಿಸು ತ್ತಾರೆ. ಆಯ್ದ ರಂಗದಲ್ಲಿ ಮುನ್ನುಗ್ಗಲು ಅವರಿಗೆ ಮುಟ್ಟು ಅಡ್ಡಿಯಾಗಿಲ್ಲ, ಮುಟ್ಟಿನ ಭಯದ ಗಂಡಸರು ಅಡ್ಡಿಯಾಗಿದ್ದಾರೆ.

ಹೆಣ್ಣು 21ನೇ ಶತಮಾನದಲ್ಲಿ ಆಕಾಶಕ್ಕೇನು, ಅಂತರಿಕ್ಷಕ್ಕೇ ಹಾರಿದರೂ, ಧರ್ಮೇಂದ್ರನಂತಹ ಗಂಡಸರು ಹತ್ತೊಂಬತ್ತನೇ ಶತಮಾನದಿಂದ ಒಂದು ಹೆಜ್ಜೆ ಕೂಡಾ ಮುಂದಿಟ್ಟಿಲ್ಲ.

ಹತ್ತೊಂಬತ್ತನೇ ಶತಮಾನದಲ್ಲಿ ಇಂತಹ ಚಿಂತನೆಗಳಿದ್ದವು. 'ಸ್ತ್ರೀತನ ಒಂದು ರೋಗ' ಎಂದು ಸಾರಿದ ಪುರಷ ವೈದ್ಯರಿದ್ದರು. ಪುರುಷರಿಗೆ ಸ್ತ್ರೀ ದೇಹದ ಮುಟ್ಟು ಬಸಿರು ಅರ್ಥವಾಗದ ಆತಂಕದ ವಿಷಯಗಳಾಗಿದ್ದವು. ಇವು ಸಂಪೂರ್ಣವಾಗಿ ಹೆಣ್ಣನ್ನು ಊನಗೊಳಿಸುವ ರೋಗಗಳು ಎಂದೇ ಭಾವಿಸಿದ್ದರು. ಹೆಣ್ಣಿನ ಸಕಲ ಕ್ರಿಯೆಯನ್ನೂ ಮುಟ್ಟೇ ನಿರ್ಣಯಿಸುತ್ತದೆ ಎಂದು ಭಾವಿಸಿದರು. ಸ್ತ್ರೀ ದೇಹದಲ್ಲಿ ಮನಸ್ಸನ್ನು ಸಂಪೂರ್ಣವಾಗಿ ನಿಯಂತ್ರಿಸುವ ಅಂಗ ಆಕೆಯ ಮಿದುಳಲ್ಲ, ಅಂಡಾಶಯ ಎಂದು ಗಟ್ಟಿಯಾಗಿ ನಂಬಿದ್ದರು. ಒಂದು ಶತಮಾನದ ನಂತರವೂ, ಮಹಿಳೆಯರು ಮುಸುಕಿನ ಮರೆಯಿಂದ ಹೊರಬಿದ್ದು, ಎಲ್ಲ ರಂಗಗಳಲ್ಲೂ ಮುಖಂಡರಾಗಿ ಮೆರೆದರೂ, ಧರ್ಮೇಂದ್ರ ದೇವ್ ಅಂತಹ ಗಂಡಸರಿನ್ನೂ ಶತಮಾನದಷ್ಟು ಹಿಂದಿದ್ದಾರೆ.

ಹೆಂಗಸರ ಮುಟ್ಟು, ಗಂಡಸರನ್ನು ಹೆಚ್ಚು ಕಾಡುತ್ತದೆ ಎಂದು ನನ್ನ ಅನುಮಾನ. ಕಛೇರಿಯಲ್ಲಿ ಕೆಟ್ಟ ದಿನವನ್ನು ಕಳೆದು ಮನೆಗೆ ಬಂದು ಒಂದಿಷ್ಟು ರೇಗಿದರೆ, 'ಏಕೆ ಆ ದಿನವಾ?' ಎಂದು ಗಂಡ ಕೇಳುವಾಗ, ಹತ್ತರಲ್ಲಿ ಐದು ಬಾರಿ ಅವರ ಊಹೆ ತಪ್ಪಿರುತ್ತದೆ. ನಿಜ ಹೆಂಗಸರಲ್ಲಿ ಸ್ತ್ರೀ ಹಾರ್ಮೋನುಗಳು ಏರುಪೇರಾಗುತ್ತವೆ. ಆದರೆ ಗಂಡಸರಲ್ಲಿ ಪುರುಷ ಹಾರ್ಮೋನ್ 'ಟೆಸ್ಟೋಸ್ಟೆರಾನ್' ಏರುಪೇರಾಗುವುದಿಲ್ಲ ಎಂದೇನೂ ಇಲ್ಲ. ಅದು ಮುಟ್ಟಾಗಿ ಹೊರಬೀಳುವುದಿಲ್ಲ ಅಷ್ಟೆ. 45ರ ವಯಸ್ಸಿನ ಹೆಂಗಸರು ಅನು ತ್ಪಾದಕರು ಎಂದು ಸಾರುವ ಧರ್ಮೇಂದ್ರ ಅವರಿಗೆ ಖಂಡಿತಾ 60ರ ಅರಳು ಮರಳು ಆವರಿಸಿದೆ, ಬಹುಶಃ ಇಂತಹ ಗಂಡಸ ರನ್ನು ಅರವತ್ತಕ್ಕೆ ಮೊದಲೆ ಮನೆಗೆ ಕಳುಹಿಸಿದ್ದರೆ ಒಳ್ಳೆಯದಿತ್ತು!

# ಗ್ರಾಮಾಭಿವೃದ್ಧಿಯಿಂದಲೇ ಕ್ಷೇಮಾಭ್ಯುದಯ

ಗ್ರಾಮ ಸುರಾಜ್ಯವೇ ಕರ್ನಾಟಕ ಸರ್ಕಾರದ ಮೂಲಧ್ಯೇಯ. ಸ್ಥಿರ ಮತ್ತು ಸಂಪದ್ಭರಿತ ಸಮಾಜಕ್ಕೆ ಆಧಾರ ಸುಭದ್ರ ಗ್ರಾಮೀಣ ವಲಯ. ಗ್ರಾಮೀಣ ಜನತೆಯ ಮೂಲ ಆಶಯಗಳಾದ ಕೃಷಿ, ವಿದ್ಯುತ್, ನೀರು, ಆರೋಗ್ಯ ಮತ್ತು ಶಿಕ್ಷಣ ವಲಯಗಳಲ್ಲಿ ಸರ್ಕಾರದ ವಿಶೇಷ ಆಸ್ಥೆ, ವಸ್ತುನಿಷ್ಠ ಒತ್ತಾಸೆ. ಅವರು ಈ ಕ್ಷೇತ್ರಗಳಲ್ಲಿನ ಆಧುನಿಕ ಸೌಲಭ್ಯಗಳ ಫಲಾನುಭವಿಗಳಾಗಲು ಸರ್ಕಾರ ತನ್ನೆಲ್ಲ ಗಮನವನ್ನು ಕೇಂದ್ರೀಕರಿಸಿದೆ. ಸ್ಫೂರ್ತಿದಾಯಕ ಹೆಜ್ಜೆಗಳನ್ನಿಟ್ಟಿದೆ.

❖ ಸುಭಿಕ್ಷೆಯ ವಾತಾವರಣ ಮೂಡಿಸಿರುವ ಮುಂಗಾರು ಹಂಗಾಮಿನಲ್ಲಿ ರೈತರಿಗೆ ಶೇಕಡಾ 50ರ ರಿಯಾಯಿತಿ ದರದಲ್ಲಿ ಬಿತ್ತನೆ ಬೀಜಗಳ ವಿತರಣೆಗೆ ವ್ಯವಸ್ಥೆ.

❖ ಸಾವಯವ ಕೃಷಿಗೆ ಉತ್ತೇಜನ ನೀಡಲು ರೂ. 4.00 ಕೋಟಿ ಮೀಸಲು.

❖ ಬರಗಾಲ ಸಮಸ್ಯೆಗೆ ದೀರ್ಘಾವಧಿ ಪರಿಹಾರ ಸುಜಲ ಜಲಾನಯನ ಪ್ರದೇಶಗಳ ಅಭಿವೃದ್ಧಿ ಕಾರ್ಯಕ್ರಮಕ್ಕೆ ರೂ. 150-00 ಕೋಟಿ ಆಯೋಜನೆ, 1,42,316 ಹೆಕ್ಟೇರ್ ಜಲಾನಯನ ಪ್ರದೇಶದ ಅಭಿವೃದ್ಧಿಗೆ ಗುರಿ.

❖ ಕೃಷಿ ಮೂಲ ಸೌಕರ್ಯ ಅಭಿವೃದ್ಧಿಗಾಗಿ ಲೋಕನಾಯಕ ಜಯಪ್ರಕಾಶ್ ನಾರಾಯಣ್ ನಿಧಿಯ ಬಳಕೆ

❖ ಗ್ರಾಮೀಣ ಪ್ರದೇಶಗಳಿಗೆ ದಿನವಿಡಿ ವಿದ್ಯುತ್ ಪೂರೈಕೆಗೆ ಕ್ರಮ

❖ ಅಂತರ್ಜಲ ವೃದ್ಧಿಗಾಗಿ ಕೆರೆ ಅಂಗಳಗಳ ಅಭಿವೃದ್ಧಿ ಮತ್ತು ಕೆರೆಗಳ ಸಂರಕ್ಷಣೆ

❖ ಉಪಗ್ರಹ ನೆರವಿನ ಮೂಲಕ ಮೈಸೂರಿನ ಅಬ್ದುಲ್ ನಜೀರ್ ಸಾಬ್ ರಾಜ್ಯ ಗ್ರಾಮೀಣ ಅಭಿವೃದ್ಧಿ ಸಂಸ್ಥೆಯಿಂದ ಪಂಚಾಯತ್ ಪ್ರತಿನಿಧಿಗಳಿಗೆ ವ್ಯಾಪಕ ತರಬೇತಿ.

❖ ದೂರದ ಜಿಲ್ಲೆಗಳಿಗೆ ಟೆಲಿಮೆಡಿಸನ್ ಸೌಲಭ್ಯ. ರಾಜ್ಯದಲ್ಲಿನ 1,000 ಪ್ರಾಥಮಿಕ ಆರೋಗ್ಯ ಕೇಂದ್ರಗಳಿಗೆ ಟೆಲಿಮೆಡಿಸನ್ ಸೌಲಭ್ಯ ಕಲ್ಪಿಸುವ ಗುರಿ.

❖ ಶಾಲಾ ಮಕ್ಕಳಿಗೆ ಉಚಿತ ಸಮವಸ್ತ್ರ ಮತ್ತು ಅಕ್ಷರ ದಾಸೋಹದೊಂದಿಗೆ ಸಂಪೂರ್ಣ ಸಾಕ್ಷರತೆಯತ್ತ ದಾಪುಗಾಲು

**ಸಮೃದ್ಧ ಕರ್ನಾಟಕ ಸ್ವಾವಲಂಬಿ ಕರ್ನಾಟಕ**

ಕರ್ನಾಟಕ ವಾರ್ತೆ.

# ಬೈನಾ ಬೀಚ್ ದುರಂತ

**– ಹೇಮಲತಾ ಮಹಿಷಿ**

ಗೋವಾದ "ಬೈನಾ ಬೀಚ್" ಇತ್ತೀಚೆಗೆ ಎಲ್ಲರಿಗೂ ಚಿರಪರಿಚಿತವಾಗಿರುವ ಹೆಸರು. ಒಡೆದು ಹಾಕಿರುವ ಮನೆಗಳು, ಅಸಹಾಯಕರಾಗಿ ಗೋಳಾಡುತ್ತಿರುವ ಮಹಿಳೆಯರು, ಏನಾಗುತ್ತಿದೆಯೆಂದು ತಿಳಿಯದೇ ಅವರೊಂದಿಗೆ ಕುಳಿತ ಮುಗ್ಧ ಮಕ್ಕಳು, ಬಾಳಿನ ಸಂಜೆಯಲ್ಲಿ ತಲೆಯ ಮೇಲಿನ ಸೂರನ್ನೂ ಕಳೆದುಕೊಂಡ ನಿಸ್ಸಹಾಯಕ ವೃದ್ಧ ಮಹಿಳೆಯರು, ಚಿಕ್ಕ-ಪುಟ್ಟ ಕೆಲಸಗಳನ್ನು ಮಾಡುತ್ತಾ ಬಾಳಿಗೊಂದು ಆಧಾರ ಕಂಡುಕೊಂಡಿದ್ದ ಪುರುಷರು, ಇದುವರೆಗೆ ಹೇಗೋ-ಎಂತೋ ಕಟ್ಟಿಕೊಂಡಿದ್ದ ಬಾಳಿನ ವಿನಾಶವನ್ನು ಕಂಡು ಅದರ ನಡುವೆಯೇ ತಮ್ಮ ಕಳೆದು ಹೋಗಿರುವ ಬಾಳಿನ ಅವಶೇಷವನ್ನು ಹುಡುಕುತ್ತಾ, ನಿರಾಶೆಯಿಂದ ಅಲೆದಾಡುತ್ತಿರುವ ನಿಸ್ಸಹಾಯಕರು–ಇವರೆಲ್ಲರೂ ಪತ್ರಿಕೆಗಳ ಮೂಲಕ, ದೂರದರ್ಶನಗಳ ಮೂಲಕ ನಮಗೆ ಪರಿಚಿತರಾದರು.

ಸುಂದರ ಗೋವಾ ಬೀಚ್‌ನಲ್ಲಿ ವೇಶ್ಯಾವೃತ್ತಿಯನ್ನು ನಡೆಸುತ್ತಿದ್ದವರನ್ನು ಅಲ್ಲಿಂದ ಹೊರಹಾಕಿ ಸಮುದ್ರತೀರದ ಸೌಂದರ್ಯ - ರಮಣೀಯತೆಯನ್ನು ಕಾಪಾಡುವುದಕ್ಕಾಗಿ, ಅಲ್ಲಿಯ ಜನರಿಗೆ ಏಡ್ಸ್‌ನಂತಹ ಭಯಂಕರ ಕಾಯಿಲೆ ಬರದಂತೆ ಕಾಪಾಡುವುದಕ್ಕಾಗಿ ಅಪರಾಧೀಕರಣದ ತಡೆಗಟ್ಟುವಿಕೆಗಾಗಿ ಆ ವೃತ್ತಿಯಲ್ಲಿರುವ ಮಹಿಳೆಯರನ್ನು ರಕ್ಷಿಸುವುದಕ್ಕಾಗಿ ಈ ವಿಧ್ವಂಸಕೃತ್ಯವನ್ನು ಮಾಡಲಾಯಿತು ಎಂಬುದಾಗಿ ಗೋವಾ ಸರ್ಕಾರ ತನ್ನ ಕ್ರಮವನ್ನು ಸಮರ್ಥಿಸಿಕೊಳ್ಳುತ್ತಿದೆ. ಅದು ಸರ್ಕಾರದ ಜಾಗ, ಮುನಿಸಿಪಾಲಿಟಿಯ ಜಾಗ, ಅಲ್ಲಿರುವವರು ಆಕ್ರಮವಾಗಿ ನೆಲಸಿರುವವರು, ತನಗೆ ಅವರನ್ನು ಒಕ್ಕಲೆಬ್ಬಿಸುವ ಅಧಿಕಾರ ಇದೆ, ಇಷ್ಟರ ಮೇಲೆ ಸುಪ್ರೀಂ ಕೋರ್ಟಿನ ಹಾಗೂ ಮಾನವ ಹಕ್ಕುಗಳ ಆಯೋಗದ ನಿರ್ದೇಶನದಂತೆ ಆ ಉದ್ಯೋಗ ಕಳೆದುಕೊಂಡ ಮಹಿಳೆಯರಿಗೆ ಪುನರ್ ವಸತಿ ಕಲ್ಪಿಸುತ್ತೇವೆ ಎಂದೂ ಗೋವಾ ಸರ್ಕಾರ ಹೇಳಿದೆ. ಎಲ್ಲವೂ ಸರಿಯೆಂದೇ ಕಾಣುತ್ತಿದೆಯಲ್ಲ ! ವೇಶ್ಯಾವೃತ್ತಿ ಅಸಹ್ಯಕರವಾದುದು, ಅದರಿಂದ ಏಡ್ಸ್ ಖಂಡಿತಾ ಬಂದೇ ಬರುತ್ತದೆ, ಇಷ್ಟರ ಮೇಲೆ ಬೀಚಿಗೆ ಗೌರವಾನ್ವಿತ ವ್ಯಕ್ತಿಗಳು ಹೋಗುವಂತಾಗಬೇಕಲ್ಲವೇ ? ಹೇಗಿದ್ದರೂ ಆ ಮಹಿಳೆಯರಿಗೆ ಪುನರ್ ವಸತಿ ಕಲ್ಪಿಸುತ್ತಾರೆ, ಮತ್ತೇನು ಬೇಕು.... ? ಒಂದು ಕ್ಷಣ ನಮ್ಮ ಕಲುಕಿದ ಮನಸ್ಸು ಶಾಂತವಾಗುತ್ತದೆ. ಜೀವನ ಯಥಾ ಪ್ರಕಾರ ಮುಂದುವರಿಯುತ್ತದೆ. ಉಳಿದವರಿಗೆ ಅಂದರೆ ಬೈನಾ ಬೀಚಿನ ನಿರ್ವಸಿತ ಜನರಿಗಲ್ಲ.

ಬೈನಾ ಬೀಚಿನ ಜನರ ಕಥೆ ಇಂದು - ನಿನ್ನೆಯದಲ್ಲ 30-40 ವರ್ಷಗಳ ಆಚೆಗಿನದು. ಅವರನ್ನು ಅಲ್ಲಿಂದ ಎತ್ತಂಗಡಿ ಮಾಡಿಸಲು ಪ್ರಯತ್ನಿಸುತ್ತಿರುವುದು 1997ರಿಂದ. 2004ರಲ್ಲಿ ಈ ಕಥೆ ಹೀಗೆ ದುರಂತದಲ್ಲಿ ಮುಕ್ತಾಯ ಕಾಣಬೇಕಿತ್ತೇ ? ಬೇರೆಯ ನಾಗರಿಕ, ರಚನಾತ್ಮಕ ಮಾರ್ಗಗಳಿರಲಿಲ್ಲವೇ ? ಇದರ ಹಿಂದಿರುವ ರಾಜಕೀಯವೇನು, ನ್ಯಾಯಾಂಗದ ಪಾತ್ರವೇನು, ಇತಿಹಾಸದ ಪ್ರಕ್ರಿಯೆಯೇನು, ಮಹಿಳಾವಾದಿಗಳ ಉದ್ದೇಶ ವೇನು ? ಅದರಲ್ಲಿ ಕೊನೆಗೆ ಆದುದ್ದೇನು ? ಎಲ್ಲಿಂದಲೋ ಆರಂಭವಾದದ್ದು ಇನ್ನೆಲ್ಲೋ ಮುಕ್ತಾಯವಾಗುತ್ತದೆ, ಯಾರೋ ಬಲಿಪಶುಗಳಾಗುತ್ತಾರೆ. ಗುಡಿಸಲುಗಳನ್ನು, ಬಡಜನರ ಮನೆಗಳನ್ನು ನೆಲಸಮ ಮಾಡಿ, ಬಡಜನರನ್ನು ಅಲ್ಲಿಂದ ಒದ್ದೋಡಿಸಿದ ನಂತರ ಬೈನಾ ಬೀಚು ಒಂದು ಸುಂದರ ಪ್ರವಾಸಿ ತಾಣವಾಗುತ್ತದೆ, ಭವ್ಯ ರಿಸಾರ್ಟ್‌ಗಳು ಅಲ್ಲಿ ತಲೆ ಎತುತ್ತವೆ, ಶ್ರೀಮಂತ ಪ್ರವಾಸಿಗಳು ಅವುಗಳಲ್ಲಿ ತಂಗುತ್ತಾರೆ, ಕಾಲ್‌ಗರ್ಲ್ ಗಳು ಕಾರಿನಲ್ಲಿ ಬರುತ್ತಾರೆ, ಗೋವಾ ಸರ್ಕಾರದ ಬೊಕ್ಕಸಕ್ಕೆ ಪ್ರವಾಸೋದ್ಯಮದಿಂದ ಹಣದ ಹೊಳೆ ಹರಿದುಬರುತ್ತದೆ. ಗೋವಾದ ಜನ ಏಡ್ಸ್ ಭೀತಿಯಿಂದ ಮುಕ್ತರಾಗುತ್ತಾರೆ, ಆದರೆ ಏಡ್ಸ್‌ನಿಂದಲ್ಲ, ಅಲ್ಲಿಂದ ಬೇರುಸಮೇತ ಎಸೆಯಲ್ಪಟ್ಟ ಬಡ ಮಹಿಳೆಯರು-ಮಕ್ಕಳು ಎಲ್ಲಿ ಹೋಗಿರುತ್ತಾರೋ, ಬದುಕಲು ಏನು ಮಾಡುತ್ತಾರೋ, ಜೀವ ಉಳಿಸಿಕೊಳ್ಳಲು ಬೇರೆ ರಾಜ್ಯದಲ್ಲಿ ಮತ್ತೆ ವೇಶ್ಯಾವೃತ್ತಿಗೆ ಮೊರೆ ಹೋಗುತ್ತಾರೋ ಅಥವಾ ಪ್ರಾಣವನ್ನೇ ಬಿಟ್ಟಿರುತ್ತಾರೋ..... ಒಟ್ಟಾರೆ, ಅವರು ಜನರ ನೆನಪಿನಿಂದ ಕ್ರಮೇಣ ಮರೆಯಾಗುತ್ತಾರೆ. ನಮಗಾದರೂ ಅದನ್ನು ನೆನಸಿಕೊಳ್ಳುತ್ತಾ, ವಿಷಾದ ಪಟ್ಟುಕೊಳ್ಳುತ್ತಾ ಕುಳಿತು ಕೊಳ್ಳಲು ಸಮಯವೆಲ್ಲಿದೆ ? ಬೇರೆಯದೇ ಸಮಸ್ಯೆಗಳು, ಬೇರೆಯದೇ ಸಂಕಟಗಳು, ನೋವು ಜೀವನದಲ್ಲಿ ಹೋರಾಟ ನಿರಂತರ.

ಬೈನಾ ಬೀಚ್‌ನಲ್ಲಿರುವ ಜನರನ್ನು ಅಲ್ಲಿಂದ ತೆರವು ಮಾಡಿಸಲು ಗೋವಾ ಸರ್ಕಾರ ಮತ್ತು ಮುನಿಸಿಪಾಲಿಟಿ ನೋಟೀಸುಗಳನ್ನು ಜಾರಿ ಮಾಡತೊಡಗಿದಾಗ, ತೊಂದರೆ ಕೊಡತೊಡಗಿದಾಗ ಸಂತ್ರಸ್ತರು ರಾಷ್ಟ್ರೀಯ ಮಾನವ ಆಯೋಗಕ್ಕೆ ದೂರು ಸಲ್ಲಿಸಿದ ನಂತರ 23, ಜುಲೈ 1997ರಂದು ಆಯೋಗವು ಒಂದು ಮಧ್ಯಂತರ ಆಜ್ಞೆ ಹೊರಡಿಸಿ ಬೈನಾ ಬೀಚಿನ ಬಡಜನರನ್ನು ತೆರವುಗೊಳಿಸದಂತೆ ಪ್ರತಿಬಂಧಕಾಜ್ಞೆ ನೀಡಿತು. ಅವರನ್ನು ಹೊರದೂಡಲು ಕಿರುಕುಳ ಕೊಡುತ್ತಿದ್ದ ಬೆದರಿಕೆ ಒಡ್ಡುತ್ತಿದ್ದ ಕ್ರಿಮಿನಲ್‌ಗಳಿಂದ ಆ ಜನರಿಗೆ ರಕ್ಷಣೆ ಕೊಡಬೇಕೆಂದು ಪೋಲೀಸ್ ವರಿಷ್ಠರಿಗೆ ಸೂಚಿಸಿತು. ಹಾಗಾಗಿ ನೇರವಾಗಿ ಅವರನ್ನು ಒಕ್ಕಲೆಬ್ಬಿಸಲು ಸಾಧ್ಯವಾಗದೇ ಗೋವಾ ಸರ್ಕಾರ ಪೋಲೀಸರ ಮೂಲಕ ಬೈನಾ ಬೀಚಿನ ಸುತ್ತ ಪಹರೆ ಹಾಕಿ ಪ್ರವಾಸಿಗರಾರೂ ಅಲ್ಲಿ ಹೋಗದಂತೆ ತಡೆಹಾಕಿತು.

ಇದರಿಂದ ಅಲ್ಲಿ ವೃತ್ತಿ ನಡೆಸುತ್ತಿದ್ದ ಮಹಿಳೆಯರಿಗೆ ಆದಾಯ ವಿಲ್ಲದಂತಾಗಿ ಬದುಕು ಬೇಡವೆನಿಸಿ ದಿನ ನಿತ್ಯದ ಊಟಕ್ಕೂ ತೊಂದರೆಯಾಯಿತು. ಪ್ರವಾಸಿಗರ ಮೇಲೆ ಅವಲಂಬಿಸಿದ್ದ ಸಣ್ಣ-ಪುಟ್ಟ ವ್ಯಾಪಾರಿಗಳ ವ್ಯಾಪಾರ ನಿಂತುಹೋಯಿತು. ಪೋಲೀಸರು ಅನೇಕರನ್ನು ಬಂಧಿಸಿದರು. ಧಾಳಿ ಮಾಡಿದರು. ಎಷ್ಟರ ಮಟ್ಟಿಗಿನ ದಿಗ್ಬಂಧನವೆಂದರೆ ಆ ಮಹಿಳೆಯರಿಗೆ ಟಾಯ್ಲೆಟ್‌ಗೆ ಹೋಗುವುದೂ ಕಷ್ಟವಾಯಿತು.

ನಿಸ್ಸಹಾಯಕರಾದ ಮಹಿಳೆಯರು ಆ ಸಂದರ್ಭದಲ್ಲಿ ರಾಷ್ಟ್ರೀಯ ಮಹಿಳಾ ಆಯೋಗಕ್ಕೆ ತಮ್ಮ ರಕ್ಷಣೆಗಾಗಿ ಮತ್ತೆ ಮೊರೆ ಹೋದರು. ಇದರಿಂದಾಗಿ ನ್ಯಾಯಮೂರ್ತಿ ಜೆ.ಡಿ. ಕಾಮತ್‌ರ ಅಧ್ಯಕ್ಷತೆಯಲ್ಲಿ ಒಂದು ವಿಚಾರಣಾ ಆಯೋಗವನ್ನು ನೇಮಿಸಲಾಯಿತು. ಆ ಆಯೋಗದ ಸದಸ್ಯರು ಸ್ಥಳಕ್ಕೆ ಖುದ್ದು ಭೇಟಿ ನೀಡಿ, ವಿಚಾರಣೆ ನಡೆಸಿ ತನ್ನ ವರದಿಯನ್ನು ಸಲ್ಲಿಸಿತು. ವೇಶ್ಯಾವೃತ್ತಿಯ ಸಮಸ್ಯೆಗಳನ್ನು ಕೇವಲ ಬೈನಾಬೀಚಿನ ಸಮಸ್ಯೆಯನ್ನಾಗಿ ಮಾತ್ರ ನೋಡದೇ ರಾಷ್ಟ್ರೀಯ-ಅಂತರಾಷ್ಟ್ರೀಯ ಸಮಸ್ಯೆಯಾಗಿ ಪರಿಗಣಿಸಿ, ಅನೇಕ ಪರಿಹಾರಗಳನ್ನು ವರದಿಯಲ್ಲಿ ಸೂಚಿಸಿತು. ಮುಖ್ಯವಾಗಿ, ಆ ಮಹಿಳೆಯರನ್ನು ಅಲ್ಲಿಂದ ಒಕ್ಕಲೆಬ್ಬಿಸಬೇಕಾದಲ್ಲಿ ಅವರಿಗೆ ಮೊದಲು ಪುನರ್ವಸತಿ ಕಲ್ಪಿಸಬೇಕು, ತರಬೇತಿ-ಉದ್ಯೋಗಾವಕಾಶ ಕೊಡಬೇಕು, ಗೋವಾ ರಾಜ್ಯದಲ್ಲಿರಲು ಬಯಸುವವರಿಗೆ ಅಲ್ಲಿಯೇ ಪುನರ್ವಸತಿಯ ವ್ಯವಸ್ಥೆ ಮಾಡಬೇಕು. ಆ ವೃತ್ತಿ ಮುಂದುವರಿಸುವವರಿಗೆ ಅವರ ಜಾಗವನ್ನು ಕೆಂಪುದೀಪದ ಜಾಗ ಎಂದು ಗುರುತಿಸಿ, ಆರೋಗ್ಯ ರಕ್ಷಣೆಯ ವ್ಯವಸ್ಥೆ ಮಾಡಬೇಕು ಎಂಬ ಅಂಶಗಳು ಮುಖ್ಯವಾದವು.

ಬೈನಾ ಬೀಚಿನಲ್ಲಿರುವ ಮಹಿಳೆಯರಲ್ಲಿ ಹೆಚ್ಚಿನವರು ಕರ್ನಾಟಕ ರಾಜ್ಯದವರಾದ್ದರಿಂದ ಕರ್ನಾಟಕ ರಾಜ್ಯ ಮಹಿಳಾ ಆಯೋಗವು ಇದೇ ಸಮಯದಲ್ಲಿ ತನ್ನ ಇಬ್ಬರು ಸದಸ್ಯರ ಆಯೋಗವನ್ನು ಅಲ್ಲಿಗೆ ಕಳಿಸಿತು. ನವೆಂಬರ್ 1, 1997ರಲ್ಲಿ ಬೈನಾ ಬೀಚಿಗೆ ಭೇಟಿ ನೀಡಿದ ಈ ಆಯೋಗವು ಕರ್ನಾಟಕ ಮಹಿಳಾ ಆಯೋಗಕ್ಕೆ ವಿಸ್ತಾರವಾದ ವರದಿಯೊಂದನ್ನು ಸಲ್ಲಿಸಿ ಅಲ್ಲಿಯ ಮಹಿಳೆಯರ ದುಃಸ್ಥಿತಿಯನ್ನು ವಿವರಿಸಿತು. ತಕ್ಷಣವೇ ಪೋಲೀಸರನ್ನು ಬೈನಾ ಬೀಚಿನಿಂದ ಹಿಂದೆ ಕರೆಸಿಕೊಂಡು ಅಲ್ಲಿಯ ಜನರಿಗೆ ಜೀವನ ನಿರ್ವಹಣೆಗೆ ಅವಕಾಶ ಕೊಡಬೇಕು ; ಮರ್ಮಗೋವಾ ಬಂದರು ಆ ಜಾಗದಲ್ಲಿ ತನ್ನ ವಿಸ್ತರಣೆ ಮಾಡಿಕೊಳ್ಳುವುದಿದ್ದಲ್ಲಿ ಅಲ್ಲಿ ವಾಸಿಸುತ್ತಿರುವ ಜನರಿಗೆ ಪುನರ್ವಸತಿ ಕಲ್ಪಿಸುವ ಹೊಣೆಗಾರಿಕೆ ಹೊರಬೇಕು ; ಗೋವಾ ಸರ್ಕಾರ ಆ ಜಾಗದ ಉಪಯೋಗದ ಬಗ್ಗೆ ಪಾರದರ್ಶಕತೆ ಇಟ್ಟುಕೊಂಡು ಅದರ ಕಾರ್ಯನೀತಿಯ ಬಗ್ಗೆ ಹೇಳಿಕೆ ಕೊಡಬೇಕು ಮತ್ತು ಈಗಾಗಲೇ ಗೋವಾ ಭೂ ಕಾನೂನಿನ ಡಿನೋಟೀಸುಗಳನ್ನು ಕೊಟ್ಟು ಆ ಕಾನೂನಿನಡಿ ಮನೆಗಳನ್ನು ನೆಲಸಮ ಮಾಡುವ ಅಧಿಕಾರ ಸರ್ಕಾರಕ್ಕೆ ಇರುವದರಿಂದ ಕಾನೂನನ್ನು ಕೂಡಲೇ ಹಿಂತೆಗೆದುಕೊಳ್ಳಬೇಕು ಎಂಬ ಶಿಫಾರಸ್ಸುಗಳು ವರದಿಯಲ್ಲಿವೆ.

ಬೈನಾಬೀಚಿನ ಜನರ ಮಾನವ ಹಕ್ಕುಗಳ ರಕ್ಷಣೆಗಾಗಿ ಇಷ್ಟೆಲ್ಲಾ ಹೋರಾಟಗಳು ನಡೆಯುತ್ತಿರುವಾಗಲೇ ಬೈನಾಬೀಚಿನಲ್ಲಿಯೇ ತನ್ನ ಕಚೇರಿ ಹೊಂದಿರುವ 'ಸವೇರಾ' ಎಂಬ ಸಂಸ್ಥೆಯೊಂದು ಗೋವಾ ಸರ್ಕಾರ ಮತ್ತು ಇತರ ಸರ್ಕಾರಿ ಸಂಸ್ಥೆ ಅಧಿಕಾರಿಗಳ ವಿರುದ್ಧ ಹೈಕೋರ್ಟಿನಲ್ಲಿ ರಿಟ್ ಅರ್ಜಿಯೊಂದನ್ನು ಸಲ್ಲಿಸಿ, ಅಸಹಾಯಕರಾಗಿ, ಬಡತನದಿಂದಾಗಿ, ಇತರರ ಶೋಷಣೆ-ವಂಚನೆ ಬಲಾತ್ಕಾರಗಳಿಗೆ ಬಲಿಯಾಗಿ ವೇಶ್ಯಾವೃತ್ತಿಗೆ ತಳ್ಳಲ್ಪಡುವ ಮಹಿಳೆಯರ ರಕ್ಷಣೆಗಾಗಿ, ಹಾಗೂ ಅಲ್ಲಿನ ಶೋಷಣೆಯನ್ನು ತಡೆಗಟ್ಟಲು ಸರ್ವೋಚ್ಚ ನ್ಯಾಯಾಲಯವು ನೀಡಿರುವ ನಿರ್ದೇಶನಗಳನ್ನು ಗೋವಾ ಸರ್ಕಾರ ಪಾಲಿಸುತ್ತಿಲ್ಲ, ಅದರ ಬದಲಿಗೆ ಅವರ ವಿರುದ್ಧ ತೀಕ್ಷ್ಣಕ್ರಮಗಳನ್ನು ಕೈಗೊಳ್ಳುತ್ತಿದೆ, ಪೋಲೀಸರು ಅವರ ಮೇಲೆ ದೌರ್ಜನ್ಯವೆಸಗುತ್ತಿದ್ದಾರೆ. ದಿಗ್ಬಂಧನ ಹಾಕುತ್ತಿದ್ದಾರೆ. ಅವರಿಗೆ ಯಾವುದೇ ಸೌಲಭ್ಯಗಳಿಲ್ಲ, ಅವರಿಗೆ ಘನತೆಯಿಂದ ಬದುಕಲು ಅವಕಾಶ ಕೊಡುತ್ತಿಲ್ಲ ಎಂದೆಲ್ಲಾ ಆರೋಪಿಸಿ ಗೋವಾ ಸರ್ಕಾರ ಸರ್ವೋಚ್ಚ ನ್ಯಾಯಾಲಯದ ನಿರ್ದೇಶನವನ್ನು ಪಾಲಿಸಿ ಬೈನಾಬೀಚಿನ ಜನರಿಗೆ ಜೀವನ ನಡೆಸಲು ಅವಕಾಶ ಕಲ್ಪಿಸಿಕೊಡಬೇಕೆಂದು ಪ್ರಾರ್ಥಿಸಿ ನ್ಯಾಯಾಲಯಕ್ಕೆ ಮನವಿ ಸಲ್ಲಿಸಿತು. ಅದೇ ಸಂದರ್ಭದಲ್ಲಿ ಹಿಂದಿನ ಎಲ್ಲಾ ಸಮಿತಿಗಳ ವರದಿಗಳನ್ನು ಸಲಹೆಗಳನ್ನು ನ್ಯಾಯಾಲಯದ ಗಮನಕ್ಕೆ ತರಲಾಯಿತು. ವಾದ-ವಿವಾದಗಳನ್ನು ಆಲಿಸಿದ ಉಚ್ಚ ನ್ಯಾಯಾಲಯ, ಸರ್ವೋಚ್ಚ ನ್ಯಾಯಾಲಯದ ನಿರ್ದೇಶನ, ನ್ಯಾಯಮೂರ್ತಿ ಕಾಮತ್‌ರ ಸಲಹೆಗಳನ್ನು ಪಾಲಿಸಬೇಕೆಂದು ಹೇಳುತ್ತಲೇ, ಕೂಡಲೇ ಅಲ್ಲಿರುವ 250 ಕ್ಯೂಬಿಕಲ್‌ಗಳನ್ನು (ವೇಶ್ಯಾವೃತ್ತಿಗೆ ಬಳಸುತ್ತಿದ್ದುದು) ಕಾನೂನಿನ ವಿಧಿ-ವಿಧಾನಗಳನ್ನು ಅನುಸರಿಸಿ ಮುಚ್ಚಿಸಬೇಕು, ಆ ಜಾಗ ಸರ್ಕಾರಕ್ಕೆ -ಮುನಿಸಿಪಾಲಿಟಿಗೆ ಸೇರಿದ್ದರೆ ಅವರನ್ನು ಅಲ್ಲಿಂದ ಹೊರಹಾಕಿ ಅವುಗಳನ್ನು ಕೆಡವಬೇಕು, ಹೊರರಾಜ್ಯಗಳಿಂದ ಕಾಂಟ್ರಾಕ್ಟ್ ಆಧಾರದ ಮೇಲೆ ವೇಶ್ಯೆಯರನ್ನು ಇವರು ಮುಂದೆ ಕರೆತರದಂತೆ ಕ್ರಮ ಕೈಗೊಳ್ಳಬೇಕು, ಇಲ್ಲಿರುವ ವೇಶ್ಯೆಯರು ಹೊರರಾಜ್ಯಗಳಿಂದ ಬಂದಿರುವುದರಿಂದ ಅವರ ಪುನರ್ವಸತಿ ಕಲ್ಪಿಸುವ ಹೊಣೆಗಾರಿಕೆ ಗೋವಾ ರಾಜ್ಯದ ಮೇಲಿರುವುದಿಲ್ಲ, ಆದ್ದರಿಂದ, ಅವರನ್ನು ಅವರವರ ರಾಜ್ಯಗಳಿಗೆ ಗಡಿಪಾರು ಮಾಡಬೇಕು. ಗೋವಾ ರಾಜ್ಯ ಮಹಿಳಾ ಆಯೋಗ, ರಾಷ್ಟ್ರೀಯ ಮಹಿಳಾ ಆಯೋಗ ಹಾಗೂ ಆಯಾಯ ರಾಜ್ಯ ಮಹಿಳಾ ಆಯೋಗಗಳೊಂದಿಗೆ ಸಮಾಲೋಚಿಸಿ, ಆಯಾಯ ರಾಜ್ಯಗಳಲ್ಲಿ ಅವರಿಗೆ ಪುನರ್ವಸತಿ ಕಲ್ಪಿಸಬೇಕು ಎಂದು ದಿನಾಂಕ 13-10-2003ರಂದು ಆಜ್ಞೆ ಮಾಡಿತು ಮತ್ತು ಆಜ್ಞೆಯ ಪರಿಪಾಲನೆಗೆ 9 ತಿಂಗಳ ಕಾಲಾವಕಾಶವನ್ನು ನೀಡಿತು. ತಕ್ಷಣವೇ

ಸ್ಥಳೀಯ ಮ್ಯಾಜಿಸ್ಟ್ರೇಯರು ಅವರನ್ನು ಅಲ್ಲಿಂದ ಎಬ್ಬಿಸಲು ಕ್ರಮ ಕೈಗೊಳ್ಳಬೇಕೆಂದೂ ನಿರ್ದೇಶನ ನೀಡಿತು.

ಉಚ್ಚನ್ಯಾಯಾಲಯದ ಈ ಆಜ್ಞೆಯ ಅನುಸಾರ ಆ ಜಾಗದಲ್ಲಿ ಒಂದು ಸಮೀಕ್ಷೆ ನಡೆಸಿದ ಗೋವಾ ರಾಜ್ಯ ಮಹಿಳಾ ಆಯೋಗ, ಬೈನಾಬೀಚಿನಲ್ಲಿ ಕರ್ನಾಟಕದಿಂದ ಬಂದ 479 ಮಹಿಳೆಯರಿದ್ದು ಅವರು 17 ರಿಂದ 37 ವರ್ಷ ಒಳಗಿನವ ರಾಗಿದ್ದಾರೆಂದೂ ಅವರ ಬಗ್ಗೆ ಕ್ರಮ ಕೈಗೊಳ್ಳಲು ಕೂಡಲೇ ಕರ್ನಾಟಕ ರಾಜ್ಯ ಮಹಿಳಾ ಆಯೋಗದ ನಿಯೋಗವನ್ನು ಕಳಿಸಬೇಕೆಂದೂ ಕೇಳಿತು. ರಾಜ್ಯ ಸರ್ಕಾರದಿಂದ ಹೋದ ಅಧಿ ಕಾರಿಗಳ ನಿಯೋಗ, ಬೈನಾ ವೇಶ್ಯೆಯರ ಬಗ್ಗೆ ಪುನರ್ ಸಮೀಕ್ಷಾ ವರದಿ ಪಡೆದ ಮೇಲೆ ಕರ್ನಾಟಕ ಸರ್ಕಾರ ತನ್ನ ರಾಜ್ಯದಿಂದ ಹೋದ ವೇಶ್ಯೆಯರಿಗೆ ಪುನರ್ ವಸತಿ ಕಲ್ಪಿಸಲು ಕ್ರಮ ಕೈಗೊಳ್ಳು ವುದಾಗಿ ತಿಳಿಸಿ ಹಿಂದಿರುಗಿತು. ನಂತರದ ಜೂನ್ 2004ರ ವರದಿಯ ಪ್ರಕಾರ ಅಲ್ಲಿರುವ 66 ಕರ್ನಾಟಕದಿಂದ ಹೋದ ವೇಶ್ಯೆಯರಲ್ಲಿ 8 ಜನರು ಮಾತ್ರ ತಮ್ಮ ಹುಟ್ಟೂರಿಗೆ ಮರಳಿ ಹೋಗಲು ಬಯಸುತ್ತಾರೆಂದೂ, ಉಳಿದವರು ಗೋವಾ ದಲ್ಲಿಯೇ ಇದ್ದು ಬೇರೆ ಉದ್ಯೋಗ ಕೈಗೊಳ್ಳಲು ಇಚ್ಛಿಸುತ್ತಾ ರೆಂದು, ಇಬ್ಬರು ಮಾತ್ರ ತಮ್ಮ ಈಗಿನ ಉದ್ಯೋಗದಲ್ಲಿಯೇ ಮುಂದುವರೆಯಲು ಇಚ್ಛಿಸುತ್ತಾರೆಂದೂ ತಿಳಿಸಲಾಯಿತು. ಉಳಿದ ವೇಶ್ಯೆಯರು ಎಲ್ಲಿ ಹೋದರು ?- ಅವರ ಪಾಡು ಏನು ? ಬೈನಾಬೀಚ್‌ನಲ್ಲಿದ್ದವರು ವೇಶ್ಯೆಯರು ಮಾತ್ರವಲ್ಲ. ಬೇರೆಯ ಸಣ್ಣ-ಪುಟ್ಟ ಉದ್ಯೋಗ, ಕೂಲಿ-ನಾಲಿ ಮಾಡಿಕೊಂಡು ವಾಸಿಸು ತ್ತಿದ್ದ ಜನರೂ ಅಲ್ಲಿದ್ದರು. ಅವರೇನಾದರು ? ನಾವು ಪತ್ರಿಕೆಗಳಲ್ಲಿ ನೋಡಿದ್ದು ಒಡೆದ ಮನೆಗಳನ್ನು, ಹರಡಿದ ಸಾಮಾನುಗಳನ್ನು, ತಲೆಯ ಮೇಲಿನ ಸೂರನ್ನು ಕಳೆದುಕೊಂಡ ಗಂಡಸರು-ಹೆಂಗಸರು-ಮಕ್ಕಳು-ಮುದುಕರನ್ನು. ಅವರ ಪುನರ್ವಸತಿಯ ಪ್ರಶ್ನೆ ಏನಾಯಿತು ? ಹೈಕೋರ್ಟ್ ಕೊಟ್ಟ ನಿರ್ದೇಶನ ವೇಶ್ಯೆಯರ ಬಗ್ಗೆ ಮಾತ್ರ ಸಂಬಂಧಿಸಿದ್ದು. ಆದರೆ, ಅಲ್ಲಿದ್ದವರು ವೇಶ್ಯೆಯರು ಮಾತ್ರವಲ್ಲ, ಇತರರೂ ಇದ್ದರು. ಅವರೆಲ್ಲರ ಮನೆಗಳನ್ನು, ಅಂಗಡಿಗಳನ್ನು ಧ್ವಂಸಮಾಡಲು ಸರ್ಕಾರಕ್ಕೆ ಯಾರು ಅನುಮತಿ ಕೊಟ್ಟದ್ದು ? ಉಚ್ಚ ನ್ಯಾಯಾಲಯಕ್ಕೆ ರಿಟ್ ಅರ್ಜಿ ಹಾಕಿದ ಉದ್ದೇಶ, ಅಲ್ಲಿದ್ದ ಮಹಿಳೆಯರಿಗೆ ರಕ್ಷಣೆಯನ್ನು ಕೋರಿ, ಅವರ ಪರವಾಗಿ. ಆದರೆ, ಕೊನೆಗೆ ಬಂದ ಆಜ್ಞೆಯೇನು ? ಸರ್ಕಾರಕ್ಕೆ ನೇರವಾಗಿ ಅವರನ್ನು ಹೊರಹಾಕಲು ಅನುಮತಿ ನೀಡುವ ಆಜ್ಞೆ. ರಿಟ್ ಹಾಕುವ ಮೂಲಕ 'ಸವೇರಾ' ಅವರಿಗೆ ತಮ್ಮ ಕೆಲಸ ಸುಸೂತ್ರವಾಯಿತು. ರಾಷ್ಟ್ರೀಯ ಮಾನವ ಆಯೋಗ, ಮಹಿಳಾ ಆಯೋಗದ ಮೂಲಕ ವಿಚಾರಣೆ ನಡೆಸಿದ್ದಲ್ಲಿ ಈ ರೀತಿಯ ಮಾನವ ದುರಂತ ಆಗುತ್ತಿರಲಿಲ್ಲ ವೇನೋ ! ಅಲ್ಲದೆ, ಗೋವಾ ರಾಜ್ಯ ಭಾರತದ ಭಾಗವಾಗಿಲ್ಲವೇ? ಅದೇನು ಬೇರೆಯೇ ರಾಷ್ಟ್ರವೇ ? ಎಂದು ಸಂದೇಹ ಉಂಟಾಗುವುದು ಸಹಜ. ದೇಶದ ಪ್ರತಿಯೊಬ್ಬ ನಾಗರೀಕನಿಗೆ ಎಲ್ಲಿ ಬೇಕಾದರೂ (ಕಾಶ್ಮೀರ ಬಿಟ್ಟು) ವಾಸಿಸುವ, ಉದ್ಯೋಗ ಕೈಗೊಳ್ಳುವ ಹಕ್ಕನ್ನು ಭಾರತ ಸಂವಿಧಾನ ಮೂಲಭೂತ ಹಕ್ಕನ್ನಾಗಿ ನೀಡಿರುವಾಗ ಅಲ್ಲಿರುವ ವೇಶ್ಯೆಯರು ಬೇರೆ ಬೇರೆ ರಾಜ್ಯಗಳಿಂದ, ಬಂದಿರುವವರು, ಆದ್ದರಿಂದ ಅವರನ್ನು ಆಯಾಯ ರಾಜ್ಯಗಳಿಗೆ 'ಡಿಪೋರ್ಟ್' ಮಾಡಬೇಕು ಎಂದು ಆಜ್ಞೆ ಹಾಕುವುದು ಎಷ್ಟು ಸರಿ ? ಅಂತಹ ಆಜ್ಞೆ ಸಂವಿಧಾನಕ್ಕೆ ವಿರುದ್ಧವಾದುದಲ್ಲವೇ ? ಆ ಮಹಿಳೆಯರ ಇಚ್ಛೆಗೆ ವಿರುದ್ಧವಾಗಿ ಹಾಗೆ ಮಾಡಲು ಕ್ರಮಬದ್ಧವೇ ? ಕ್ರಿಮಿನಲ್‌ಗಳನ್ನು ಗಡಿಪಾರು ಮಾಡಲು ಅವಕಾಶವಿದೆ ನಿಜ. ಆದರೆ ವೇಶ್ಯೆಯರನ್ನು ಗಡಿಪಾರು ಮಾಡಲಾಗದು. ಏಕೆಂದರೆ, ವೇಶ್ಯಾವೃತ್ತಿ ಅಪರಾಧವಲ್ಲ. ವೇಶ್ಯಾವೃತ್ತಿಯನ್ನು ಸಂಘಟಿಸುವುದು, ಅದರ ಆದಾಯದ ಮೇಲೆ ಮಧ್ಯವರ್ತಿಗಳು ಬದುಕುವುದು, ಸಾರ್ವಜನಿಕ ಸ್ಥಳಗಳಲ್ಲಿ ನಾಗರಿಕರಿಗೆ ತೊಂದರೆಯಾಗುವಂತೆ ನಡೆದುಕೊಳ್ಳುವುದು ಅಪರಾಧ. ಆದರೆ, ಇಲ್ಲಿ ಶಿಕ್ಷೆಯಾಗಿರುವುದು ಅಸಹಾಯಕ ಸ್ಥಿತಿಯಲ್ಲಿ ವೃತ್ತಿಗೆ ದೂಡಲ್ಪಟ್ಟ ಮಹಿಳೆಯರಿಗೇ ಹೊರತು, ಅವರನ್ನು ಶೋಷಿಸುತ್ತಿರುವ ವ್ಯಕ್ತಿಗಳಿಗಲ್ಲ. ಹಣ ಪಡೆದು ಅವರನ್ನು ಮಾರಿದವರಿಗಲ್ಲ.

ಕರ್ನಾಟಕ ರಾಜ್ಯ ಮಹಿಳಾ ಆಯೋಗದ ಸಮಿತಿ 1997ರಲ್ಲಿ ಮಾಡಿದ ವರದಿಯ ಪ್ರಕಾರ, ಬೈನಾಬೀಚಿನ ಕೆಂಪುದೀಪದಲ್ಲಿ 6700 ನಿವಾಸಿಗಳಿದ್ದರು. ಕೇವಲ ವೇಶ್ಯೆಯರು ಮೇಲಲ್ಲ, ಬೇರೆಯವರನ್ನೂ ಒಳಗೊಂಡು 342 ಜನರಿಗೆ ನೋಟೀಸು ಆ ವೇಳೆಗೆ ಜಾರಿಯಾಗಿತ್ತು. ಅಲ್ಲಿದ್ದ ಬಂದರಿನ ಕೂಲಿ-ಕಾರ್ಮಿಕರು, (ಇವರು ಉತ್ತರ ಪ್ರದೇಶಧಿಂದ ಬಂದ ಭೈಯ್ಯಾಗಳು, 1960ರಿಂದ ಇಲ್ಲಿರುವವರು), ಫಕೀರ್ ಸಮುದಾಯದವರು, ರಫಿಯಾ ಅರಬ್ಬಿ ಮದರಸಾ ಶಾಲೆ, ಅಂಗಡಿಯವರು, ಬಾರ್ ಮಾಲೀಕರು, ಇವರೆಲ್ಲರೂ ಆ ಗುಂಪಿನಲ್ಲಿ ಬರುತ್ತಾರೆ. ಸರ್ಕಾರಿ ಜಮೀನಿನ ಮೇಲೆ ಕಾನೂನು ಬಾಹಿರವಾಗಿ ವಾಸಿಸುತ್ತಿರುವುದ ರಿಂದ ಆ ಜನರು ತಮ್ಮ ಖರ್ಚಿನಲ್ಲಿಯೇ ತಮ್ಮ ಕಟ್ಟಡಗಳನ್ನು ಅಲ್ಲಿಂದ ತೆಗೆದುಹಾಕಿ ಖಾಲಿ ಮಾಡಬೇಕೆಂದು ನೋಟೀಸು ತಿಳಿಸುತ್ತದೆ.

ಈ ಎಲ್ಲಾ ಮನೆಗಳು ಮುನಿಸಿಪಾಲಿಟಿಗೆ ಮನೆಗಂದಾಯ ಕೊಡುತ್ತಾ ಬಂದಿದೆ ಎಂದು ಇಲ್ಲಿನ ನಿವಾಸಿಗಳು ಹೇಳಿರುವು ದಲ್ಲದೇ ತಮ್ಮ ತಮ್ಮ ಕೆಳಕಂಡ ದಾಖಲೆಗಳನ್ನು ಸಮಿತಿಯ ಮುಂದಿಟ್ಟಿದ್ದಾರೆ.

1. ಅಬ್ಕಾರಿ ಇಲಾಖೆ ಮದ್ಯ ಮಾರಲು ಕೊಟ್ಟ ಪರವಾನಿಗೆ.
2. ಹೋಟೆಲ್ ನಡೆಸಲು ಪರವಾನಿಗೆ
3. ಮನೆಗಂದಾಯ ರಸೀತಿಗಳು
4. ವಿದ್ಯುಚ್ಛಕ್ತಿ ನೀರು ಬಿಲ್ಲುಗಳು
5. ಅಳತೆ-ತೂಕ ಇಲಾಖೆಯ ಪರವಾನಿಗೆ

CPMG/KA/BG-8/2003-05 RNI No. 45577/88

*Posted at Basavanagudi P.O. On the 25th of every Month*

6. ಆಹಾರ-ಔಷಧಿ ಇಲಾಖೆಯ ಪರವಾನಿಗೆ
7. ಹೆಸರಿನ ಫಲಕ ಹಾಕಲು ಪರವಾನಿಗೆ
8. ಆದಾಯ ತೆರಿಗೆ ಪಾವತಿ
9. ಸಗಟು ಮಾರಾಟದ ಪರವಾನಿಗೆ
10. ಮಾರಾಟ ತೆರಿಗೆ ಬಿಲ್ಲುಗಳು.

ಇದಲ್ಲದೆ ದಿನಾಂಕ 14-3-97ರಲ್ಲಿ ಗೋವಾ ವಿಧಾನ ಸಭೆಯಲ್ಲಿ ಕೇಳಿದ ಪ್ರಶ್ನೆಗೆ ಉತ್ತರವಾಗಿ ಆಗಿನ ಮುಖ್ಯಮಂತ್ರಿ ರಾಣೆಯವರು ಸಂಬಂಧಿಸಿದ ಮುನಿಸಿಪಲ್ ಕೌನ್ಸಿಲ್ಲಿನ ಆಕ್ಷೇಪಣೆ ಇಲ್ಲವೆಂದು ಹೇಳಿಕೆ ಪಡೆದು ಅಬ್ಕಾರಿ ಇಲಾಕೆ ಬೈನಾಬೀಚಿನ ಬಾರ್ ಮತ್ತು ರೆಸ್ಟೋರೆಂಟಿನವರಿಗೆ ಪರವಾನಿಗೆ ನೀಡಿರುವುದಾಗಿಯೂ ಮತ್ತು ಇದರ ಮೊದಲು ಅಬ್ಕಾರಿ ಇಲಾಖೆ ಮುನಿಸಿಪಲ್ ಕೌನ್ಸಿಲ್‌ನಿಂದ ಅಲ್ಲಿನ ಕಟ್ಟಡಗಳು ಕಾನೂನು ಬದ್ಧವಾಗಿರುವ ಬಗ್ಗೆ ಮಾಹಿತಿ, ಒಪ್ಪಿಗೆ ಪಡೆದೇ ಪರವಾನಗಿ ಕೊಟ್ಟಿರುವುದಾಗಿ ಒಪ್ಪಿಕೊಂಡಿದ್ದಾರೆ. ಅಂದ ಮೇಲೆ, ಉಚ್ಚ ನ್ಯಾಯಾಲಯದ ಆಜ್ಞೆಯನ್ನು ನೆಪವಾಗಿಸಿಕೊಂಡು ಎಲ್ಲಾ ಮನೆ - ಕಟ್ಟಡಗಳನ್ನು ಕೆಡವಿದ್ದಾದರೂ ಹೇಗೆ ? ಅಲ್ಲಿಯ ಜನಗಳಿಗೆ ಪರಿಹಾರ ನೀಡಬೇಕಾದ ಹೊಣೆಗಾರಿಕೆ ಗೋವಾ ಸರ್ಕಾರಕ್ಕೆ ಇಲ್ಲವೇ ? ಬೈನಾಬೀಚಿನಲ್ಲಿರುವ ಜನ 30-40 ವರ್ಷಗಳಿಂದ ಅಲ್ಲಿದ್ದಾರೆ. ಅವರೆಲ್ಲರ ಹೆಸರು ಗೋವಾ ರಾಜ್ಯದ ಮತದಾರರ ಪಟ್ಟಿಯಲ್ಲಿದೆ. ಅಂತಿದ್ದೂ ಒಂದು ಸರ್ಕಾರ ಜನರ ಬಗ್ಗೆ ಈ ರೀತಿ ಅಮಾನುಷವಾಗಿ ನಡೆದುಕೊಳ್ಳಲು ಸಾಧ್ಯವಾದದ್ದು ಹೇಗೆ ? ಬೇರೆ ರಾಜ್ಯದಿಂದ ಬಂದಿರುವವರ ಬಗ್ಗೆ ಆ ರಾಜ್ಯದ ಕರ್ತವ್ಯ-ಜವಾಬ್ದಾರಿಗಳೇನು ಇಲ್ಲವೇ ? ಏನು ಬೇಕಾದರೂ ಮಾಡಬಹುದೇ ? ಮುಂದಿನ ದಿನಗಳಲ್ಲಿ ಈ ಎಲ್ಲ ಜಮೀನನ್ನು ಯಾವ ರೀತಿಯಲ್ಲಿ ಉಪಯೋಗಿಸುತ್ತಾರೆಂದು ಕಾದು ನೋಡಬೇಕಾಗಿದೆ. ಇಲ್ಲಿಯ ಜನ ಭಾಜಪಗೆ ಮತ ನೀಡದೇ ಕಾಂಗ್ರೆಸ್‌ಗೆ ಮತ ನೀಡಿದ್ದೇ ಇದಕ್ಕೆ ಕಾರಣವೆಂದು ಕೆಲವರ ಊಹೆ. ಒಟ್ಟಾರೆ ಬಲಿಪಶುಗಳಾದವರು ನಿಸ್ಸಹಾಯಕರು, ಬಡಜನರು, ಶೋಷಿತ ಮಹಿಳೆಯರು, ಮಕ್ಕಳು. ಸ್ವತಂತ್ರ ಭಾರತದಲ್ಲಿ ಗೋವಾದಂತಹ ಸುಂದರ ತಾಣದಲ್ಲಿ ಈ ರೀತಿಯ ವಿಕೃತತೆಗೆ ಅವಕಾಶ ಕೊಡಬಾರದಿತ್ತು. ಇದು ತಪ್ಪಿಸಬಹುದಾಗಿದ್ದ ಒಂದು ಮಾನವ ದುರಂತ ಎನ್ನಬಹುದು.

"Achala" 108, Skyline Surabhi,
14 - P , Vidyapeeta Road,
BSK III Stage,
Bangalore - 560 085

To :

Smt/Sri